CPMG / KA / BG-GPO/13/2003-2005

**ವಿಶ್ವಮಾನವ ವರ್ಷ**



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

ಸಂಪುಟ ೧೩೯ | ಬೆಂಗಳೂರು, ಗುರುವಾರ, ಡಿಸೆಂಬರ್ ೧೬, ೨೦೦೪ (ಮಾರ್ಗಶಿರ ೨೫, ಶಕ ವರ್ಷ ೧೯೨೬) | ಸಂಚಿಕೆ ೫೦

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದಿಂದ ಮುದ್ರಣಗೊಂಡ ಪುಸ್ತಕಗಳ ದರದಲ್ಲಿ ರಿಯಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಡಿಎಎಂ: ಪ್ರಕಟಣಾ ವಿಭಾಗ: 2004-05, ದಿನಾಂಕ: 9.9.2004.

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಮೇಲೆ ಓದಲಾದ ಪತ್ರದಲ್ಲಿ ಇಲಾಖೆಯು ಸುಮಾರು 100 ಕ್ಕೂ ಹೆಚ್ಚಿನ ಪ್ರಕಟಣಾ ಪುಸ್ತಕಗಳನ್ನು ಹೊರತಂದಿದ್ದು ಇದನ್ನು ಸಂಶೋಧಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಸಂಶೋಧನಾ ಕಾರ್ಯಕ್ಕೆ ಅನುವಾಗುವ ದೃಷ್ಟಿಯಿಂದ ಶೇಕಡ 10 ರಷ್ಟು ರಿಯಾಯಿತಿಯನ್ನು ನೀಡಲು ಉದ್ದೇಶಿಸಿದೆಯೆಂದು ತಿಳಿಸಿರುತ್ತಾರೆ ಹಾಗೂ ಈ ಉದ್ದೇಶಿತ ರಿಯಾಯಿತಿಯನ್ನು ನೀಡಿದಲ್ಲಿ ವ್ಯಾಪಕ ಪ್ರಚಾರ ದೊರೆಯುತ್ತದಲ್ಲದೆ ಈ ಇಲಾಖೆಯಲ್ಲಿ ಮುದ್ರಿತಗೊಂಡಿರುವ ಪುಸ್ತಕಗಳು ಹೆಚ್ಚಿನ ರೀತಿಯಲ್ಲಿ ಮಾರಾಟ ಮಾಡಲು ಸಾಧ್ಯವಾಗುವುದು ಹಾಗೂ ಸಂಶೋಧನಾ ಪುಸ್ತಕಗಳ ದಾಸ್ತಾನು ಬಗ್ಗೆ ಭಾರತದ ನಿಯಂತ್ರಕರು ಮತ್ತು ಮಹಾಲೆಕ್ಕ ಪರಿಶೋಧಕರ 1996-97 ಮತ್ತು 1997-98ರ ವರದಿಯ ಕಂಡಿಕೆ ಸಂಖ್ಯೆ: 3.5ಕ್ಕೆ ಉತ್ತರವಾಗಿ ಪುಸ್ತಕಗಳ ದಾಸ್ತಾನನ್ನು ಗಣನೀಯ ಪ್ರಮಾಣದಲ್ಲಿ ತಗ್ಗಿಸಲು ಅನುಪಾಲನಾ ವರದಿಯಲ್ಲಿ ತಿಳಿಸಿದೆ. ಹೀಗೆ ರಿಯಾಯಿತಿ ನೀಡುವುದರಿಂದ ವಿದ್ಯಾರ್ಥಿಗಳು ಹಾಗೂ ಸಂಶೋಧಕರಿಗೆ ಶೈಕ್ಷಣಿಕ ಚಟುವಟಿಕೆಗಳಿಗೆ ಉತ್ತೇಜನ ನೀಡಿದಂತಾಗುವುದೆಂದು ತಿಳಿಸಿದ್ದಾರೆ.

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ವಿದ್ಯಾರ್ಥಿಗಳಿಗೆ ಹಾಗೂ ಸಂಶೋಧಕರಿಗೆ ಇಲಾಖೆಯ ಸಂಶೋಧನಾ ಪ್ರಕಟಣೆಗಳನ್ನು ಮಾರಾಟ ಮಾಡಲು ಶೇಕಡ 10 ರಷ್ಟು ರಿಯಾಯಿತಿ ನೀಡುವ ಬಗ್ಗೆ ಸೂಕ್ತ ಮಂಜೂರಾತಿ ಆದೇಶವನ್ನು ನೀಡಲು ಕೋರಿರುತ್ತಾರೆ.

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 183 ಕೆಎಂಯು 2004, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ವಿದ್ಯಾರ್ಥಿಗಳಿಗೆ ಹಾಗೂ ಸಂಶೋಧಕರಿಗೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಸಂಶೋಧನಾ ಪ್ರಕಟಣೆಗಳನ್ನು ಮಾರಾಟ ಮಾಡಲು ಶೇಕಡ 10 ರಷ್ಟು ರಿಯಾಯಿತಿ ನೀಡಲು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರಿಗೆ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆಯ ದಿನಾಂಕ: 14.10.2004ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 1111 ಅಂಆಸ 2004ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಪಿ.ಆರ್. 1302

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಪಿ. ಸುಬ್ರಹ್ಮಣ್ಯ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಹೆಚ್. ಬಸವರಾಜ್, ಸಹಾಯಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಸೊರಬ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ಅಂತಿಮ ಆದೇಶ .

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರ ಪತ್ರ ಸಂಖ್ಯೆ. ಜಿಪಂಶಿ/ಸಿಬ್ಬಂದಿ (3)/ಇಂವಿವ/49/02-03, ದಿನಾಂಕ: 8-7-2003.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂ. ಗ್ರಾಅಪ 15 ಇ ಎನ್‌ಕ್ಯೂ 03, ದಿನಾಂಕ: 3-10-2003.
3. ಶ್ರೀ ಪಿ. ಸುಬ್ರಹ್ಮಣ್ಯ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಹೆಚ್. ಬಸವರಾಜ್, ಸಹಾಯಕ ಇಂಜಿನಿಯರ್, ಇವರುಗಳ ದಿನಾಂಕ: 20-11-03 ರ ಲಿಖಿತ ಹೇಳಿಕೆಗಳು.
4. ಸರ್ಕಾರದ ಆದೇಶ ಸಂ. ಗ್ರಾಅಪ 15 ಇ ಎನ್‌ಕ್ಯೂ 03, ದಿ. 7-1-2004.
5. ವಿಚಾರಣಾಧಿಕಾರಿಗಳ ವರದಿ ದಿನಾಂಕ: 27-7-2004 .
6. ಶ್ರೀ ಪಿ. ಸುಬ್ರಹ್ಮಣ್ಯ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಹೆಚ್. ಬಸವರಾಜ್, ಸಹಾಯಕ ಇಂಜಿನಿಯರ್, ಇವರುಗಳಿಗೆ ಜಾರಿಗೊಳಿಸಲಾದ 2ನೇ ಕಾರಣ ಕೇಳುವ ನೋಟೀಸ್ ದಿ: 17-8-2004.
7. ಶ್ರೀ ಪಿ. ಸುಬ್ರಹ್ಮಣ್ಯ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಹೆಚ್. ಬಸವರಾಜ್, ಸಹಾಯಕ ಇಂಜಿನಿಯರ್, ಇವರುಗಳ ದಿನಾಂಕ: 3-9-04 ರ ಲಿಖಿತ ಹೇಳಿಕೆಗಳು.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗಇವರು ಮೇಲೆ ಓದಲಾದ ಕ್ರಮ ಸಂಖ್ಯೆ. (1) ರ ಪತ್ರದಲ್ಲಿ ಸೊರಬ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಬರಪರಿಹಾರ ಕಾಮಗಾರಿ ಅನುಷ್ಠಾನಕ್ಕಾಗಿ ಕೂಲಿಗಾಗಿ ಕಾಳು ಯೋಜನೆಯಡಿ ಬಿಡುಗಡೆಗೊಳಿಸಿದ ಆಹಾರ ಧಾನ್ಯಗಳ ವಿತರಣೆಯಲ್ಲಿ ಅವ್ಯವಹಾರವಾಗಿದ್ದು, ಈ ಅವ್ಯವಹಾರಗಳಿಗೆ ಅನುಷ್ಠಾನಾಧಿಕಾರಿಗಳಾದ ಶ್ರೀ ಪಿ. ಸುಬ್ರಹ್ಮಣ್ಯ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಹೆಚ್. ಬಸವರಾಜ್, ಸಹಾಯಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಸೊರಬ ಇವರುಗಳು ಕಾರಣರೆಂದು ಕಂಡು ಬಂದಿರುವುದರಿಂದ ಅವರುಗಳ ಮೇಲೆ ಶಿಸ್ತುಕ್ರಮ ಜರುಗಿಸಲು ಆರೋಪ ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 13 ರಡಿಯಲ್ಲಿ ನಡೆಸಲು ನಿರ್ಧರಿಸಿ ದೋಷಾರೋಪಣಾ ಪಟ್ಟಿಯನ್ನು ಮೇಲೆ ಓದಲಾದ ಕ್ರಮ ಸಂ. (2)ರ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂ. (3)ರಲ್ಲಿ ಓದಲಾದ ಪತ್ರಗಳಲ್ಲಿ ತಮ್ಮ ಮೇಲಿನ ಆಪಾದನೆಗಳನ್ನು ಆಪಾದಿತ ಅಧಿಕಾರಿಗಳು ನಿರಾಕರಿಸಿದ್ದರಿಂದ ಈ ಪ್ರಕರಣದ ಸತ್ಯಾಸತ್ಯತೆಯನ್ನು ಮನಗಾಣಲು ಮೇಲೆ ಓದಲಾದ ಕ್ರಮ ಸಂ. (4)ರ ಆದೇಶದಲ್ಲಿ ಇವರುಗಳ ವಿರುದ್ಧದ ಆಪಾದನೆಗಳ ಬಗ್ಗೆ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಉಪ ಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ಜಂಟಿ ವಿಚಾರಣೆಯನ್ನು ನಡೆಸಿ ದಿನಾಂಕ: 27-7-2004 ರಲ್ಲಿ ಆಪಾದಿತರ ಮೇಲಿನ ಆರೋಪಗಳು ಸಾಬೀತಾಗುವುದಾಗಿ ತಿಳಿಸಿದ್ದರು. ಅದರಂತೆ ವಿಚಾರಣಾ ವರದಿಯನ್ವಯ ಆಪಾದಿತರ ಮೇಲೆ ಮುಂದಿನ ಕ್ರಮ ಜರುಗಿಸುವ ಮುನ್ನ ಮೇಲೆ ಓದಲಾದ ಕ್ರಮ ಸಂ. (5)ರಂತೆ 2ನೇ ಕಾರಣ ಕೇಳುವ ನೋಟೀಸನ್ನು ಆಪಾದಿತರಿಗೆ ಜಾರಿಗೊಳಿಸಲಾಗಿತ್ತು. ಸದರಿ 2ನೇ ಕಾರಣ ಕೇಳುವ ನೋಟೀಸಿಗೆ ಆಪಾದಿತರು ಮೇಲೆ ಓದಲಾದ ಕ್ರಮ ಸಂ. (6) ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ದೋಷ ಮುಕ್ತಗೊಳಿಸುವಂತೆ ಕೋರಿದ್ದರು. ಆಪಾದಿತರ ಮೇಲಿನ ಆರೋಪಗಳು ವಿಚಾರಣಾಧಿಕಾರಿಗಳ ಅಭಿಪ್ರಾಯ ಹಾಗೂ ಎರಡನೇ ಕಾರಣ ಕೇಳುವ ನೋಟಿಸ್‌ಗೆ ಆಪಾದಿತರು ಸಲ್ಲಿಸಿರುವ ಲಿಖಿತ ಹೇಳಿಕೆಗಳು ಈ ಕೆಳಕಂಡಂತಿವೆ.

**ಆರೋಪ:1:-**

ಬರ ಪರಿಹಾರ ಕಾಮಗಾರಿ ಅಡಿ 1 ಲಕ್ಷ ಅಂದಾಜು ಮೊತ್ತದಡಿ ಮಂಜೂರಾದ ಸೊರಬ ತಾಲ್ಲೂಕಿನ ಶಕುನವಳ್ಳಿ- ಶಂಕರಿಕುಪ್ಪ ರಸ್ತೆ ಕಾಮಗಾರಿಯ ಅನುಷ್ಠಾನಕ್ಕಾಗಿ ಕೂಲಿಗಾಗಿ ಕಾಳು ಯೋಜನೆ ಅಡಿ ಬಿಡುಗಡೆಗೊಳಿಸಿದ 25 ಕ್ವಿಂಟಾಲ್ ಅಕ್ಕಿಯಲ್ಲಿ 15 ಕ್ವಿಂಟಾಲ್ ಅಕ್ಕಿಯನ್ನು ಜೆಲ್ಲಿ ಸರಬರಾಜು ಮಾಡಿದ ಶ್ರೀ. ಗುತ್ಯಪ್ಪ ಎಂಬುವರಿಗೆ ದಿ: 15-10- 2002 ರಂದು ನೀಡಿದ್ದು, ಸದರಿ 15 ಕ್ವಿಂಟಾಲ್ ಅಕ್ಕಿಯನ್ನು ಖಾಸಗಿ ವಾಹನದಲ್ಲಿ ಸಾಗಿಸುತ್ತಿದ್ದಾಗ ಗ್ರಾಮಸ್ಥರು ಮಾರ್ಗದ ಮಧ್ಯದಲ್ಲಿ ತಡೆಹಿಡಿದು ನಿಲ್ಲಿಸಿದ್ದಾರೆ. ವಿಚಾರಣೆ ನಂತರ ಈ ಅಕ್ಕಿಯನ್ನು ಅದೇ ಗ್ರಾಮದ ಶ್ರೀ.ಬಸಪ್ಪ ಜಾಡರ್ ಎಂಬುವರ ಮನೆಯಲ್ಲಿ ಮುಂದಿನ ತೀರ್ಮಾನ ಆಗುವವರೆಗೆ ಇಟ್ಟಿರುತ್ತಾರೆ. ಈ ರೀತಿ ಅಕ್ಕಿ ದುರುಪಯೋಗಪಡಿಸಿಕೊಳ್ಳಲು ಕಾರಣರಾಗಿದ್ದಾರೆ.

**ವಿಚಾರಣಾಧಿಕಾರಿಗಳ ಅಭಿಪ್ರಾಯ:-**

ಬರ ಪರಿಹಾರ ಕಾಮಗಾರಿಗಾಗಿ ನೀಡಿದ್ದ ಅಕ್ಕಿಯಲ್ಲಿ ಜೆಲ್ಲಿ ಸರಬರಾಜು ಮಾಡಿದ ಶ್ರೀ. ಗುತ್ಯಪ್ಪ ಇವರಿಗೆ ಒಂದೇ ಭಾರಿಗೆ 15 ಕ್ವಿಂಟಾಲ್ ಅಕ್ಕಿ ನೀಡಿರುವುದು ನಿಯಮಬಾಹಿರವಾಗಿದ್ದು, ಈ ಬಗ್ಗೆ ಸೊರಬ ತಾಲ್ಲೂಕ್ ನೊಡಲ್ ಅಧಿಕಾರಿ ಹಾಗೂ ತುಂಗಾ ಮೇಲ್ದಂಡೆ ಯೋಜನೆ ವಿಶೇಷ ಭೂಸ್ವಾಧೀನಾಧಿಕಾರಿಗಳಾದ ಶ್ರೀ.ಬಿ.ಟಿ.ರಾಜಣ್ಣ ಇವರು ವಿಚಾರಣೆಗೆ ಹಾಜರಾಗಿ ತಾವು ಹಿಂದೆ ನೀಡಿರುವ ವರದಿ ಒಪ್ಪುವುದಾಗಿ ಸಮರ್ಥಿಸಿಕೊಂಡಿರುವುದಾಗಿ ಹಾಗೂ ಅಲ್ಲಿನ ಕೂಲಿ ಕಾರ್ಮಿಕರಿಗೆ ಕೆಲಸ ಕೊಡುತ್ತಿಲ್ಲವೆಂದು ಮತ್ತು ಅಕ್ಕಿ ವಿತರಣೆ ಮಾಡುತ್ತಿರಲಿಲ್ಲ ಎಂಬ ವಿಚಾರಗಳನ್ನು ಸಹ ಸಮರ್ಥಿಸಿಕೊಂಡಿರುತ್ತಾರೆ. ನೊಡಲ್ ಅಧಿಕಾರಿಯ ವರದಿಗೆ ಆಪಾಧಿತರು ನೀಡಿರುವ ಉತ್ತರಗಳು ತೃಪ್ತಿಕರವಾಗಿರುವುದಿಲ್ಲವೆಂದು ಮತ್ತು ಆಹಾರಧಾನ್ಯಗಳನ್ನು ಅನಧಿಕೃತವಾಗಿ ಸಾಗಣೆ ಮಾಡಿರುವುದು

ಮೇಲ್ನೋಟಕ್ಕೆ ದೃಢಪಡುವುದಾಗಿ ಜಿಲ್ಲಾಧಿಕಾರಿಗಳು ಶಿವಮೊಗ್ಗ ಇ ವರು ಸಹ ತಿಳಿಸಿ ಶಿಸ್ತು ಕ್ರಮಕ್ಕೆ ಶಿಫಾರಸ್ ಮಾಡಿದ್ದು, ಈ ಅಂಶವು ಅವ್ಯವಹಾರ ಆಗಿರುವುದನ್ನು ಪುಷ್ಟೀಕರಿಸುತ್ತದೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ. ಇ ದಲ್ಲದೆ, ಅಕ್ಕಿ ಚೀಲಗಳನ್ನು ತಮ್ಮ ಮನೆಯಲ್ಲಿ ಇ ಟ್ಟುಕೊಂಡ ಶ್ರೀ.ಪರಸಪ್ಪ, ಇ ವರು ಬರೆದುಕೊಟ್ಟ ಮಹಜರ್ ಹೇಳಿಕೆಯಲ್ಲಿನ ಅಂಶಗಳು ಸಹ ಸದರಿ ಅಕ್ಕಿ ಚೀಲಗಳು ಕೂಲಿ ಕಾರ್ಮಿಕರಿಗೆ ವಿತರಿಸುವ ಬದಲಿಗೆ ಖಾಸಗಿ ವಾಹನದಲ್ಲಿ ಬೇರೆಡೆಗೆ ಸಾಗಿಸುತ್ತಿರುವುದು ದೃಢಪಡುತ್ತದೆ. ಈ ಎಲ್ಲಾ ಕಾರಣ ಗಳಿಂದಾಗಿ ಆಪಾದಿತರು 15 ಕ್ವಿಂಟಾಲ್ ಅಕ್ಕಿಯನ್ನು ದುರುಪಯೋಗ ಪಡಿಸಿಕೊಂಡಿರುವ ಆರೋಪ ಸಾಬೀತಾಗುತ್ತದೆ.

**ಆಪಾದಿತರ ಲಿಖಿತ ಹೇಳಿಕೆ:**

**1. ಶ್ರೀ ಹೆಚ್.ಬಸವರಾಜ್, ಕಿ ಇ ಂ**

ತಾವು ಸಕಾಇ ಂರವರಿಗೆ ಆಹಾರಧಾನ್ಯ ವಿತರಿಸುವಾಗ ನೀಡಿಕೆ ಪತ್ರ ನೀಡಿ ನಂತರ ಉಗ್ರಾಣದ ಇ ನ್‌ವಾಯ್ಸ್‌ಗೆ ಸಹಿ ಹಾಕಿ ಆಹಾರಧಾನ್ಯವನ್ನು ಪಡೆದುಕೊಂಡಿರುವುದಾಗಿ ನಂತರ ಕಾಮಗಾರಿ ನಡೆಯುವ ಸ್ಥಳಕ್ಕೆ ತೆಗೆದುಕೊಂಡು ಹೋಗಿ ಕೂಲಿಯವರಿಗೆ ಹಂಚಿರುವುದಾಗಿ ತಿಳಿಸಿದ್ದಾರೆ. ಇ ದೇ ಕಾಮಗಾರಿಗೆ ಸಂಬಂಧಿಸಿದ ಕೆಲವು ಕಾರ್ಮಿಕರು ಕಲ್ಲು ಕ್ವಾರಿಯಾದ ಬೆಳವಂತನಕೊಪ್ಪದಲ್ಲಿ ಕೆಲಸ ಮಾಡುತ್ತಿದ್ದವರಿಗೆ ಅಕ್ಕಿ ಕೊಡಬೇಕಾಗಿದ್ದುದರಿಂದ ಅಕ್ಕಿಯನ್ನು ಟ್ರಾಕ್ಟರ್ ನಲ್ಲಿ ಸಾಗಿಸುತ್ತಿದ್ದಾಗ ಅದೇ ಗ್ರಾಮದ ಕೆಲವರು ದುರುದ್ದೇಶದಿಂದ ತಡೆದು ಗಲಾಟೆ ವಾತಾವರಣ ಸೃಷ್ಟಿಸಿ ಮೇಲಾಧಿಕಾರಿಗಳಿಗೆ ಸುಳ್ಳು ಮಾಹಿತಿಯನ್ನು ಸೃಷ್ಟಿಸಿ ಕಾಮಗಾರಿಗೆ ಅಡ್ಡಿಯನ್ನುಂಟು ಮಾಡಿರುವುದಾಗಿ ತಿಳಿಸಿದ್ದಾರೆ.

**2. ಶ್ರೀ ಜಿ.ಸುಬ್ರಮಣ್ಯ , ಸಕಾಇ ಂ:**

ಮಂಡನಾಧಿಕಾರಿಗಳು ವಿಚಾರಣೆಯ ಸಮಯದಲ್ಲಿ ವಾದ ಸಲ್ಲಿಸಿ, ಮಂಡನಾಧಿಕಾರಿಯಾಗಿ ತಾವು ಲಿಖಿತ ಹೇಳಿಕೆಯ ಕಂಡಿಕೆ 4ರಲ್ಲಿ ನಮೂದಿಸಲಾದ ಸಾಕ್ಷ್ಯಾಧಾರಗಳನ್ನು ಪರೀಕ್ಷಿಸಿರುವುದಾಗಿ ಎಲ್ಲಾ ಸಾಕ್ಷಿಗಳು ಆರೋಪಗಳು ಸತ್ಯಕ್ಕೆ ದೂರವಾದ ಸಂಗತಿ ಎಂದು/ಆಹಾರಸಾಮಗ್ರಿಗಳು ದುರುಪಯೋಗಕ್ಕೆ ಸಾಗಿಸಲಾಗುತ್ತಿತ್ತು ಎಂಬ ವಿಚಾರ ತಮಗೆ ತಿಳಿಯದೆಂದು, 15 ಕ್ವಿಂಟಾಲ್ ಅಕ್ಕಿ ಹೋಗುತ್ತಿದ್ದನ್ನು ತಡೆದು ಗ್ರಾಮದಲ್ಲಿ ಮಳೆ ಬರುತ್ತಿದ್ದ ಕಾರಣ ಶ್ರೀ ಪರಸಪ್ಪ ಜಾಡರ್ ಇ ವರ ಮನೆಯಲ್ಲಿ ಇ ಳಿಸಿ ವ್ಯವಸ್ಥೆ ಮಾಡಿ ಮುಂದಿನ ಆದೇಶಕ್ಕಾಗಿ ಕಾಯ್ದಿದ್ದಾಗಿ ಸಾಕ್ಷಿದಾರರಾದ ಶ್ರೀ ಬಿ.ಟಿ.ರಾಜಣ್ಣ ಇ ವರು ತಿಳಿಸಿರುವುದನ್ನು ಮಂಡನಾಧಿಕಾರಿಗಳು ತಮ್ಮ ವಾದದಲ್ಲಿ ಉಲ್ಲೇಖಿಸಿದ್ದು, ತಾವು ಕೂಡ ಇ ದೇ ಅಂಶದ ಬಗ್ಗೆ ತಮ್ಮ ಲಿಖಿತ ವಾದವನ್ನು ವಿಚಾರಣಾಧಿಕಾರಿಗಳು ಸಲ್ಲಿಸಿದ್ದರೂ ಅದನ್ನು ವಿಚಾರಣಾ ವರದಿಯಲ್ಲಿ ಚರ್ಚಿಸದೆ ಹಾಗೂ ಕಲ್ಪಿತ ಆರೋಪಗಳ ವಸ್ತು ಸ್ಥಿತಿಗಳನ್ನು ಅಧ್ಯಾಯನ ಮಾಡದೆ ವರದಿ ಸಲ್ಲಿಸಿರುವುದು ವಾಸ್ತಾವಾಂಶಗಳಿಂದ ಕೂಡಿರುವುದಿಲ್ಲವೆಂದು ತಿಳಿಸುತ್ತಾ, ಈ ವಿಚಾರಣಾ ವರದಿಯನ್ನು ತಾವು ಒಪ್ಪುವುದಿಲ್ಲವೆಂದು ತಿಳಿಸಿರುತ್ತಾರೆ.

**ಆರೋಪ-2:-**

ಬರಪರಿಹಾರ ಕಾಮಗಾರಿಯಡಿ 1 ಲಕ್ಷ ಅಂದಾಜು ಮೊತ್ತದಲ್ಲಿ ಮಂಜೂರಾದ ಶಕುನವಳ್ಳಿ-ಶಂಕರಿಕುಪ್ಪ, ರಸ್ತೆ ಕಾಮಗಾರಿಯನ್ನು ಇ ಲಾಖಾ ವತಿಯಿಂದ ನಿರ್ವಹಿಸಲು ಕಾರ್ಯಾನುಷ್ಠಾನಕ್ಕಾಗಿ ನೀಡಲಾಗಿತ್ತು.ಆದರೆ, ಕಾಮಗಾರಿ ಅನುಷ್ಠಾನಕ್ಕಾಗಿ ತೆಗೆದು ಕೊಂಡ ಕೂಲಿ ಕಾರ್ಮಿಕರ ಪಟ್ಟಿಯನ್ನು ಅವರು ವಾಸವಾಗಿರುವ ವಿಳಾಸದೊಂದಿಗೆ ತಯಾರಿಸಿರುವುದಿಲ್ಲ. ಹಾಗೂ ಸರ್ಕಾರದ ಮಾರ್ಗಸೂಚಿ ಸಂಖ್ಯೆ: ಆರ್‌ಡಿ 64 ಟಿಎಸ್ ವೈ 2002, ದಿ: 23-8-02ನ್ನು ಅನುಸರಿಸಿರುವುದಿಲ್ಲ. ಹಾಗೂ ಎನ್‌ಎಆರ್ ನಲ್ಲಿ ಕಾರ್ಮಿಕರ ವಿಳಾಸವನ್ನು ನಮೂದಿಸಿರುವುದಿಲ್ಲ. ಹಾಗೂ ಸದರಿ ಹೆಸರಿನ ಕಾರ್ಮಿಕರು ಇ ರುವುದಿಲ್ಲ.

**ವಿಚಾರಣಾಧಿಕಾರಿಗಳ ಅಭಿಪ್ರಾಯ:**

ಈ ಕಾಮಗಾರಿಗೆ ತೆಗೆದುಕೊಂಡ ಕೂಲಿ ಕಾರ್ಮಿಕರಿಗೆ ಪಾವತಿಸಿರುವ ಕೂಲಿ ಮೊತ್ತದ ಬಗ್ಗೆ ಅನುಷ್ಠಾನಾಧಿಕಾರಿಗಳಾದ ಶ್ರೀ.ಪಿ.ಸುಬ್ರಹ್ಮಣ್ಯ, ಸಕಾಇ ಂ, ಮತ್ತು ಶ್ರೀ.ಹೆಚ್ .ಬಸವರಾಜು, ಕಿಇ ಂ, ಇ ವರು ತಯಾರಿಸಿದ ಎನ್ ಎಆರ್ ಗಳ ಪ್ರತಿಗಳನ್ನು ಪರಿಶೀಲಿಸಿದಾಗ ಕೂಲಿ ಕಾರ್ಮಿಕರ ಹೆಸರುಗಳು ಮಾತ್ರ ಕಂಡು ಬಂದಿದ್ದು ಅವರುಗಳ ವಿಳಾಸ ಇ ರುವುದಿಲ್ಲ. ಹಾಗೂ ಸದರಿ ಗ್ರಾಮದಲ್ಲಿರುವ ಕೂಲಿ ಕಾರ್ಮಿಕರ ಪಟ್ಟಿಯನ್ನು ಅವರುಗಳ ವಿಳಾಸದೊಂದಿಗೆ ತಯಾರಿಸಿ ಅಗತ್ಯತೆ ಮತ್ತು ಆದ್ಯತೆ ಪ್ರಕಾರವಾಗಿ ತಂಡತಂಡವಾಗಿ ಎಲ್ಲಾ ಕೂಲಿ ಕಾರ್ಮಿಕರನ್ನು ಕೆಲಸಕ್ಕೆ ತೊಡಗಿಸಿಕೊಂಡು ಕಾಮಗಾರಿ ನಿರ್ವಹಿಸಿರುವುದಿಲ್ಲ. ಹಾಗೂ ಕಾಮಗಾರಿ ನಡೆಯುವ ಸ್ಥಳದಲ್ಲಿಯೇ ಕೂಲಿ ಕಾರ್ಮಿಕರಿಗೆ ಆಹಾರಧಾನ್ಯ ಗಳನ್ನು ನೀಡದೆ ಸರ್ಕಾರ ದಿ: 23-8-2002ರ ಮಾರ್ಗಸೂಚಿಯನ್ನು ಉಲ್ಲಂಘಿಸಿದ್ದಾರೆ. ಈ ಆರೋಪಗಳಿಗೆ ಸಂಬಂಧಿಸಿದಂತೆ ಆಪಾದಿತರು ಯಾವುದೇ ಹಂತದಲ್ಲಿ ಯಾವುದೇ ಸಮರ್ಥನೀಯ ದಾಖಲೆ ಹಾಗೂ ವಿವರ ಮತ್ತು ಹೇಳಿಕೆಯನ್ನು ನೀಡದ ಕಾರಣ ಅವರ ಮೇಲಿನ ಈ ಆರೋಪ ಸಾಬೀತಾಗುತ್ತದೆಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ.

**ಆಪಾದಿತರ ಲಿಖಿತ ಹೇಳಿಕೆ:**

**1. ಶ್ರೀ ಹೆಚ್.ಬಸವರಾಜ್, ಕಿ ಇ ಂ**

ಶುಕುನವಳ್ಳಿ-ಶಂಕರಿಕೊಪ್ಪ ರಸ್ತೆಯ ಕಾಮಗಾರಿಯನ್ನು ನಿರ್ವಹಿಸುವ ಸಮಯದಲ್ಲಿ ಎನ್.ಎಂ.ಆರ್.ನಲ್ಲಿ ಪ್ರತಿ ಪುಟದಲ್ಲಿ ಕಾರ್ಮಿಕರ ಹೆಸರು ಮತ್ತು ಅವರು ಕೆಲಸ ಮಾಡುತ್ತಿದ್ದ ಸ್ಥಳವಾದ ಬೆಳವಂತನಕೊಪ್ಪ ಎಂದು ನಮೂದಿಸಲಾಗಿದೆ. ಅದರಂತೆ ಕೆಲಸದ ಸ್ಥಳದಲ್ಲಿದ್ದ ಕೂಲಿಕಾರರಿಗೆ ಹಂಚಲು 15 ಕ್ವಿಂಟಾಲ್ ಅಕ್ಕಿಯನ್ನು ಜಲ್ಲಿ ಹೇರಿದ ಟ್ರಾಕ್ಟರ್ ನಲ್ಲಿ ಹೇರಿಕೊಂಡು ಹೋಗುತ್ತಿರುವಾಗ ಊರಿನ ಮಧ್ಯದಲ್ಲಿ ಕೆಲವರು ತಡೆದು ಅನಾವಶ್ಯಕವಾಗಿ ಗಲಾಟೆ ಮಾಡಿ ತಡೆದು ನಿಲ್ಲಿಸಿದ್ದು, ಆನಂತರ ಜಿಲ್ಲಾಧಿಕಾರಿಗಳ ಆದೇಶದಂತೆ ತಹಸೀಲ್ದಾರ್ ಸೊರಬ ಇ ವರು ಮಹಜರ್ ಮಾಡಿ ಅಕ್ಕಿಯನ್ನು ಬಿಡುಗಡೆಗೊಳಿಸಿದ ನಂತರ ತೆಗೆದುಕೊಂಡು ಹೋಗಿ ಕ್ವಾರಿಯಲ್ಲಿ ಕೆಲಸ ಮಾಡಿದ ಕೂಲಿ ಕಾರ್ಮಿಕರಿಗೆ ಹಂಚಲಾಗಿದೆಯೆಂದು ತಿಳಿಸುತ್ತಾ, ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದಾರೆ.

**2. ಶ್ರೀ ಜಿ.ಸುಬ್ರಮಣ್ಯ, ಸಕಾಇ ಂ**

ಶುಕುನವಳ್ಳಿ - ಶಂಕರಿಕೊಪ್ಪ ರಸ್ತೆಯ ಕಾಮಗಾರಿಯನ್ನು ಇ ಲಾಖಾ ವತಿಯಿಂದ ಕೈಗೊಳ್ಳಲಾಗಿದ್ದು, ಸರ್ಕಾರದ ಮಾರ್ಗಸೂಚಿಯಂತೆ ಸ್ಥಳೀಯ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗಿದೆಯೆಂದು ಗ್ರಾಮಾಂತರ ಪ್ರದೇಶದಲ್ಲಿ ರಸ್ತೆಯ ಹೆಸರು ಬಡಾವಣೆ, ಕ್ರಾಸ್ ಇ ತ್ಯಾದಿ ಇ ಲ್ಲದ ಕಾರಣ ಕಾರ್ಮಿಕರು ವಾಸವಾಗಿರುವ ಹಳ್ಳಿಯ ಹೆಸರುಗಳನ್ನು ಎನ್.ಎಂ.ಆರ್.ನಲ್ಲಿ ನಮೂದಿಸಲಾಗಿ ದೆಯೆಂದು ತಿಳಿಸಿದ್ದಾರೆ. ಕಾರ್ಮಿಕರಿಗೆ ಏಕಕಾಲದಲ್ಲಿ ಕೆಲಸ ನೀಡುವುದು ಸಾಧ್ಯವಾಗದ ಕಾರಣ ಪ್ರಚಲಿತ ವಾಡಿಕೆಯಂತೆ ಕಾರ್ಮಿಕರನ್ನು

ತಂಡಗಳಲ್ಲಿ ಸರದಿಯ ಮೇಲೆ ನೇಮಿಸಿಕೊಂಡಿದ್ದು, ಕೆಲವು ಗ್ರಾಮಸ್ಥರು ತಮಗೆ ಬರಪರಿಹಾರ ಕಾಮಗಾರಿಗಳಿಗೆ ನೇಮಿಸಿಕೊಂಡಿಲ್ಲವೆಂದು ಪೂರ್ವಗ್ರಹ ಪೀಡಿತರಾಗಿ ಸುಳ್ಳು ಆರೋಪಗಳನ್ನು ಮಾಡಿದ್ದು, ಈ ಅಂಶಗಳನ್ನು ವಿಚಾರಣಾಧಿಕಾರಿಗಳು ತಮ್ಮ ವಿವೇಚನಾನುಸಾರ ಪರಿಶೀಲಿಸಿ, ವರದಿಯನ್ನು ಸಲ್ಲಿಸಿದ್ದು, ವಿಚಾರಣಾ ವರದಿಯು ವಾಸ್ತವಾಂಶದಿಂದ ಕೂಡಿಲ್ಲವಾದ ಕಾರಣ ತಮ್ಮ ಮೇಲಿನ ಆರೋಪಗಳನ್ನು ಕೈಬಿಟ್ಟು, ದೋಷಮುಕ್ತಗೊಳಿಸುವಂತೆ ಕೋರಿದ್ದಾರೆ.

ಆಪಾದಿತರು ಕೂಲಿಕಾರರಿಗೆ ಅಕ್ಕಿಯನ್ನು ಹಂಚಲು ಟ್ರ್ಯಾಕ್ಟರ್‌ನಲ್ಲಿ ಸಾಗಿಸುತ್ತಿದ್ದಾಗ ಈ ಅಕ್ಕಿ ದುರುಪಯೋಗವಾಗಬಹುದೆಂದು ಗ್ರಾಮಸ್ಥರು ತಡೆದು ತಹಶೀಲ್ದಾರರ ಸಮಕ್ಷಮದಲ್ಲಿ ಅಕ್ಕಿಯನ್ನು ವಾಪಸ್ಸು ಮಾಡಿರುವುದು ಕಂಡುಬರುತ್ತದೆ. ಆಪಾದಿತ ಅಧಿಕಾರಿಗಳು ಈ ಅಕ್ಕಿಯನ್ನು ಕೂಲಿಕಾರರಿಗೆ ನೀಡಿರುವ ಬಗ್ಗೆ ಎನ್.ಎಂ.ಆರ್. ಪ್ರತಿಗಳನ್ನು ಒದಗಿಸಿರುವುದನ್ನು ಪರಿಶೀಲಿಸಿದಾಗ ಅಕ್ಕಿ ದುರುಪಯೋಗವಾಗಿರುವುದಿಲ್ಲವೆಂಬ ಅಂಶ ಕಂಡುಬರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರವಾದ ಸರ್ಕಾರವು ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿಗಳ ನಿಯಮ 11ಎ ರನ್ವಯ ವಿಚಾರಣಾ ವರದಿಯನ್ನು ಒಪ್ಪದೆ ಆಪಾದಿತರು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಲಿಖಿತ ಹೇಳಿಕೆ ಹಾಗೂ ದಾಖಲೆಗಳನ್ನು ಪರಿಶೀಲಿಸಿ ಆಪಾದಿತರು 2ನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಲಿಖಿತ ಹೇಳಿಕೆಯನ್ನು ಒಪ್ಪಿ ಅವರನ್ನು ಪ್ರಕರಣದ ಆರೋಪದಿಂದ ದೋಷಮುಕ್ತಗೊಳಿಸಲು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ ಗ್ರಾಅಪ 15 ಇ ಎನ್‌ಕ್ಯೂ 2003 ಬೆಂಗಳೂರು, ದಿನಾಂಕ: 23ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸೊರಬ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಬರಪರಿಹಾರ ಕಾಮಗಾರಿ ಅನುಷ್ಠಾನಕ್ಕಾಗಿ ಕೂಲಿಗಾಗಿ ಕಾಳು ಯೋಜನೆಯಡಿ ಬಿಡುಗಡೆಗೊಳಿಸಿದ ಆಹಾರ ಧಾನ್ಯಗಳ ವಿತರಣೆಯಲ್ಲಿನ ಅವ್ಯವಹಾರ ಎಸಗಿರುವರೆಂದು ಶ್ರೀ ಪಿ. ಸುಬ್ರಹ್ಮಣ್ಯ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಶ್ರೀ ಹೆಚ್. ಬಸವರಾಜ್, ಸಹಾಯಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಸೊರಬ ಇವರುಗಳ ಮೇಲೆ ಮಾಡಲಾಗಿದ್ದ ಆಪಾದನೆ ರುಜುವಾತಾಗಿಲ್ಲವಾದ್ದರಿಂದ ಸದರಿಯವರನ್ನು ಅವರ ಮೇಲಿನ ಆರೋಪಗಳಿಂದ ಸರ್ಕಾರವು ದೋಷಮುಕ್ತಗೊಳಿಸಿದೆ.

ಈ ಇಬ್ಬರೂ ಅಧಿಕಾರಿಗಳು ಇಂತಹ ಪ್ರಕರಣಗಳಲ್ಲಿ ಇನ್ನು ಮುಂದೆ ಯಾವುದೇ ರೀತಿಯ ದೂರುಗಳಿಗೆ ಅವಕಾಶ ಮಾಡಿಕೊಡಬಾರದೆಂದು ಎಚ್ಚರಿಕೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಹೊನ್ನಪ್ಪ ನಾಯಕ್**

ಪಿ.ಆರ್. 1304 ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ), ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಉತ್ತರ ಕರ್ನಾಟಕದ ಧಾರವಾಡ ಮತ್ತು ಗುಲ್ಬರ್ಗಾಗಳಲ್ಲಿರುವ ಸಾರ್ವಜನಿಕ ಶಿಕ್ಷಣ ಆಯುಕ್ತಾಲಯಗಳ ವ್ಯಾಪ್ತಿಗೆ ಹುದ್ದೆಗಳ ಸ್ಥಳಾಂತರ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶದ ಕ್ರಮಾಂಕ: ಇಡಿ 163 ಯೋಯೋಕ 2003, ದಿನಾಂಕ: 10.11.2003.
2. ಸರ್ಕಾರಿ ಆದೇಶದ ಕ್ರಮಾಂಕ: ಇಡಿ 163 ಯೋಯೋಕ 2003, ದಿನಾಂಕ: 12.10.2004.
3. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಕ್ರಮಾಂಕ: ಸಿ5(1)ವರ್ಗ ಹು.ಸ್ಥ 27/2003-04, ದಿನಾಂಕ: 31.5.2004.

**ಪ್ರಸ್ತಾವನೆ:**

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ವ್ಯಾಪ್ತಿಯಲ್ಲಿದ್ದ ವಿವಿಧ ವೃಂದಗಳಿಗೆ ಸೇರಿದ ಒಟ್ಟು 137 ಖಾಯಂ ಹುದ್ದೆಗಳನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 10.11.2003ರ ಆದೇಶದ ಅನುಬಂಧ-2ರ ಪ್ರಕಾರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಹಾಗೂ ಗುಲ್ಬರ್ಗಾ ಅವರುಗಳ ವ್ಯಾಪ್ತಿಗೆ ವರ್ಗಾಯಿಸಲಾಯಿತು. ತರುವಾಯ ಈ ಹುದ್ದೆಗಳನ್ನು ಮೇಲೆ (2) ರಲ್ಲಿ ಓದಲಾದ ದಿನಾಂಕ: 12.10.2004ರ ಸರ್ಕಾರಿ ಆದೇಶದಲ್ಲಿ ದಿನಾಂಕ: 01.4.2004 ರಿಂದ ಒಂದು ವರ್ಷಗಳ ಅವಧಿಗೆ ವಿಸ್ತರಿಸಲಾಯಿತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 31.5.2004ರ ಪತ್ರದಲ್ಲಿ ದಿನಾಂಕ: 10.11.2003ರ ಸರ್ಕಾರಿ ಆದೇಶದನ್ವಯ ಆದ ವರ್ಗಾವಣೆಯು ಅನುಪಾತವನ್ನು ಆಧರಿಸಿ ಮಾಡಿರುವುದಿಲ್ಲ. ಬೆಂಗಳೂರು, ಧಾರವಾಡ ಮತ್ತು ಗುಲ್ಬರ್ಗ ಆಯುಕ್ತರುಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರುಗಳ ಸಂಖ್ಯೆಯನ್ನು ಆಧರಿಸಿ ಪ್ರಕರಣವನ್ನು ಪರಿಶೀಲಿಸಲಾಗಿ ವರ್ಗಾಯಿಸಿದ ಹುದ್ದೆಗಳು ಹೆಚ್ಚಾಗಿರುವುದರಿಂದ ಅವುಗಳನ್ನು ಪರಾಮರ್ಶಿಸಿ ಪರಿಷ್ಕೃತ ಆದೇಶ ಹೊರಡಿಸಲು ಕೋರಿದ್ದಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 212 ಯೋಯೋಕಾ 2004, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2004**

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ವ್ಯಾಪ್ತಿಯಿಂದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಅವರ ವ್ಯಾಪ್ತಿಗೆ 89 ಹುದ್ದೆಗಳನ್ನು, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ ಅವರ ವ್ಯಾಪ್ತಿಗೆ 48 ಹುದ್ದೆಗಳನ್ನೂ ಒಟ್ಟು 137 ಹುದ್ದೆಗಳನ್ನು ಸ್ಥಳಾಂತರಿಸಿದ ದಿನಾಂಕ: 10.11.2003ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿದ ಸರ್ಕಾರವು ಈ ಆದೇಶದ ಅನುಬಂಧದಲ್ಲಿ ತೋರಿಸಿರುವಂತೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಅವರ ವ್ಯಾಪ್ತಿಗೆ 81 ಹುದ್ದೆಗಳನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ ಅವರ ವ್ಯಾಪ್ತಿಗೆ 33 ಹುದ್ದೆಗಳನ್ನು, ಒಟ್ಟು 114 ಹುದ್ದೆಗಳನ್ನು ಮಾತ್ರ ಸ್ಥಳಾಂತರಿಸಬೇಕೆಂದು ಆದೇಶಿಸುತ್ತದೆ. ಉಳಿದ 23 ಹುದ್ದೆಗಳು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ವ್ಯಾಪ್ತಿಯಲ್ಲೇ ಮುಂದುವರಿಯುತ್ತವೆ.

ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ. ಸಂಖ್ಯೆ: ಇಡಿ 505 ಐಎಫ್(ಬಿ.ಎ) 2004, ದಿನಾಂಕ: 11.10.2004 ರಲ್ಲಿ ಪಡೆದು, ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ಇಡಿ 212 ಯೋಯೋಕಾ 2004, ದಿನಾಂಕ: 06.11.2004 ರನ್ವಯ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಮತ್ತು ಗುಲ್ಬರ್ಗಾ ಅವರುಗಳ ವ್ಯಾಪ್ತಿಗೆ ವರ್ಗಾಯಿಸಬೇಕಾದ ಹುದ್ದೆಗಳು**

| ಕ್ರ. ಸಂ. | ಹುದ್ದೆಯ ಹೆಸರು | ಸರ್ಕಾರದ ದಿ: 10.11.2003 ರಲ್ಲಿ ಸ್ಥಳಾಂತರಿಸಲು ಆದೇಶಿಸಲಾದ ಹುದ್ದೆಗಳ ಸಂಖ್ಯೆ | | | ಸರ್ಕಾರದ ದಿ: 06.11.2004ರ ಆದೇಶದನ್ವಯ ಸ್ಥಳಾಂತರಿಸಬೇಕಾದ ಹುದ್ದೆಗಳ ಸಂಖ್ಯೆ | | |
|---|---|---|---|---|---|---|---|
| | | ಧಾರವಾಡ | ಗುಲ್ಬರ್ಗ | ಒಟ್ಟು | ಧಾರವಾಡ | ಗುಲ್ಬರ್ಗ | ಒಟ್ಟು |
| 1 | ಹಿರಿಯ ಸಹಾಯಕ ನಿರ್ದೇಶಕರು | 02 | 02 | 04 | 02 | 0 | 02 |
| 2 | ಸಹಾಯಕ ನಿರ್ದೇಶಕರು | 03 | 02 | 05 | 02 | 01 | 03 |
| 3 | ಅಧೀಕ್ಷಕರು, (ಲೆಕ್ಕಪತ್ರ ಅಧೀಕ್ಷಕರು, ಸಹಾಯಕ ಸಾಂಖ್ಯಿಕ ಸೇರಿದಂತೆ) | 14 | 6 | 20 | 08 | 02 | 10 |
| 4 | ಪ್ರ.ದ.ಸ. (ಶೀಘ್ರಲಿಪಿಗಾರರು ಸೇರಿದಂತೆ) | 31 | 15 | 46 | 34 | 12 | 46 |
| 5 | ದ್ವಿ.ದ.ಸ./ಬೆರಳಚ್ಚುಗಾರರು | 24 | 11 | 35 | 25 | 10 | 35 |
| 6 | ದ್ವಿ.ದ.ಸ. ಸಹಿತ ಬೆರಳಚ್ಚುಗಾರರು | 02 | 02 | 04 | 0 | 0 | 0 |
| 7 | "ಡಿ" ಗ್ರೂಪ್ / ದಲಾಯತ್ | 10 | 08 | 18 | 10 | 08 | 18 |
| 8 | ವಾಹನ ಚಾಲಕರು | 03 | 02 | 05 | 0 | 0 | 0 |
| | **ಒಟ್ಟು** | **89** | **48** | **137** | **81** | **33** | **114** |

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1303 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಒಂದೇ ಹುದ್ದೆಯಲ್ಲಿ ಬಡ್ತಿ ಹೊಂದದೇ 20 ವರ್ಷಗಳ ಸೇವೆ ಸಲ್ಲಿಸಿದ ನೌಕರರಿಗೆ ಹೆಚ್ಚುವರಿ ವಾರ್ಷಿಕ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಬೆಳಗಾವಿ ಮಹಾನಗರ ಪಾಲಿಕೆಯ ಆಯುಕ್ತರ ಪತ್ರಗಳು ದಿನಾಂಕ: 26.6.2002 ಮತ್ತು 09.5.2003.
2. ಮಂಗಳೂರು ಮಹಾನಗರ ಪಾಲಿಕೆಯ ಆಯುಕ್ತರ ಪತ್ರಗಳು, ದಿನಾಂಕ: 04.3.2003.
3. ಮೈಸೂರು ಮಹಾನಗರ ಪಾಲಿಕೆಯ ಆಯುಕ್ತರ ಪತ್ರಗಳು, ದಿನಾಂಕ: 19.3.2003 ಮತ್ತು 21.11.2003.
4. ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯ ಆಯುಕ್ತರ ಪತ್ರ ದಿನಾಂಕ: 24.01.2004.
5. ಗುಲ್ಬರ್ಗಾ ಮಹಾನಗರ ಪಾಲಿಕೆಯ ಪತ್ರ ದಿನಾಂಕ: 10.6.2004.
6. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ: 09.5.2002.

**ಪ್ರಸ್ತಾವನೆ:**

ಮೇಲೆ 1 ರಿಂದ 5 ರವರೆಗೆ ಓದಲಾದ ಪತ್ರಗಳಲ್ಲಿ ರಾಜ್ಯದ ಮಹಾನಗರ ಪಾಲಿಕೆಗಳ ಆಯುಕ್ತರುಗಳು ಪಾಲಿಕೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ನೌಕರರು ಒಂದೇ ಹುದ್ದೆಯಲ್ಲಿ ಸತತವಾಗಿ 20 ವರ್ಷಗಳ ಸೇವೆ ಸಲ್ಲಿಸಿರುವವರಿಗೆ ರಾಜ್ಯ ಸರ್ಕಾರಿ ನೌಕರರಿಗೆ ಮೇಲೆ 6 ರಲ್ಲಿ ಓದಲಾದ ಆದೇಶದಲ್ಲಿ ಒಂದು ಹೆಚ್ಚುವರಿ ವೇತನ ಬಡ್ತಿ ನೀಡಲು ಆದೇಶಿಸಿದ್ದು, ಅದರಂತೆ ಈ ಸೌಲಭ್ಯವನ್ನು ಮಹಾನಗರ ಪಾಲಿಕೆಗಳ ನೌಕರರಿಗೂ ವಿಸ್ತರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 107 ಎಸಿಬಿ 2002, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ಮಹಾನಗರ ಪಾಲಿಕೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ : ನೌಕರರಿಗೆ ಈಗಾಗಲೇ 10 ಹಾಗೂ 15 ವರ್ಷಗಳ ಸೇವೆಗಾಗಿ ಆಯ್ಕೆ ಕಾಲಿಕ ವೇತನ ಶ್ರೇಣಿ ಹಾಗೂ ಹಿರಿಯ ವೇತನ ಶ್ರೇಣಿಗಳ ಸೌಲಭ್ಯವನ್ನು ನೀಡಿದ್ದಲ್ಲಿ 20 ವರ್ಷಗಳ ಸೇವೆಯನ್ನು ಅದೇ ಹುದ್ದೆಯಲ್ಲಿ ಪೂರೈಸಿದಂತಹ ಅರ್ಹ ಅಧಿಕಾರಿ : ನೌಕರರಿಗೆ ಒಂದು ಹೆಚ್ಚುವರಿ ವೇತನ ಬಡ್ತಿಯ ಸೌಲಭ್ಯವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2002 ದಿನಾಂಕ: 09.5.2002ರ ಆದೇಶದನ್ವಯ ಅದರಲ್ಲಿರುವ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮತ್ತು ಇದಕ್ಕೆ ತಗಲುವ ವೆಚ್ಚವನ್ನು ಆಯಾ ಮಹಾನಗರ ಪಾಲಿಕೆಗಳು ತಮ್ಮ ಸಂಪನ್ಮೂಲಗಳಿಂದಲೇ ಭರಿಸಬೇಕೆಂಬ ಷರತ್ತಿಗೆ ಒಳಪಟ್ಟು ದಿನಾಂಕ: 01.4.2002 ರಂದು ವಿಸ್ತರಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಅ.ಟಿ. ಸಂಖ್ಯೆ: ಆಇ 466 ವೆಚ್ಚ 9:2004 ದಿನಾಂಕ: 25.10.2004 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ರಾಘವೇಂದ್ರಾಚಾರ್**

ಪಿ.ಆರ್. 1305 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಸಹ್ಯಾದ್ರಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್‌ರವರ ಭದ್ರಾ ಬಲದಂಡೆ ಕಾಲುವೆಯ 400 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನಾನುಷ್ಠಾನಕ್ಕೆ ಕಾಲಾವಕಾಶ ವಿಸ್ತರಣೆ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 125 ಎನ್‌ಸಿಇ 96(8), ದಿನಾಂಕ: 10.6.1997.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 108 ಎನ್‌ಸಿಇ 2003, ದಿನಾಂಕ: 11.7.2003.
3. ಸರ್ಕಾರಿ ಆದೇಶ ಸಂಖ್ಯೆ: ಇಂಇ 108 ಎನ್‌ಸಿಇ 2003, ದಿನಾಂಕ: 6.1.2004.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ 06 ಭದ್ರಾ ಆರ್.ಬಿ.ಸಿ. 2004 / 2019, ದಿನಾಂಕ: 6.11.2004.

**ಪ್ರಸ್ತಾವನೆ:**

ಮೆಸರ್ಸ್ ಸಹ್ಯಾದ್ರಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್‌ಗೆ, ಶಿವಮೊಗ್ಗ ಜಿಲ್ಲೆಯ, ಭದ್ರಾವತಿ ತಾಲ್ಲೂಕಿನ ಎಡೇಹಳ್ಳಿ ಗ್ರಾಮದ ಬಳಿ ಭದ್ರಾ ಬಲದಂಡೆ ಕಾಲುವೆಯಲ್ಲಿ 400 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

2. ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 27.5.2004 ಮತ್ತು 26.11.2004 ರವರೆಗೆ ಮೇಲೆ (2 ಮತ್ತು 3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಣೆ ಮಾಡಲಾಗಿದೆ.

3. ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು 27.11.2004 ರಿಂದ ಮುಂದಿನ ಆರು ತಿಂಗಳವರೆಗೆ ಕಾಲಾವಕಾಶವನ್ನು ವಿಸ್ತರಿಸಬೇಕೆಂದು ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 379 ಎನ್‌ಸಿಇ 2004, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2004**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಮೆಸರ್ಸ್ ಸಹ್ಯಾದ್ರಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್, ಹಲಸೂರು, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಎಡೇಹಳ್ಳಿ ಗ್ರಾಮದ ಬಳಿ ಭದ್ರಾ ಬಲದಂಡೆ ಕಾಲುವೆಯಲ್ಲಿ (0 ಕಿ.ಮೀ. ನಿಂದ 22) 400 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 27.11.2004 ರಿಂದ ಮುಂದಿನ ಆರು ತಿಂಗಳ ಅವಧಿಗೆ ಅಂದರೆ ದಿನಾಂಕ: 26.5.2005 ರವರೆಗೆ ಮಾತ್ರ ವಿಸ್ತರಿಸಲಾಗಿದೆ.

5. ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದ ನಿಬಂಧನೆ ಮತ್ತು ಷರತ್ತುಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 1306 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ENERGY SECRETARIAT

**Subject:** Permission to KPCL to establish two Bio-mass gasifier based projects-reg.

**Read:** Letter No.A1 W4FO/BM/505, dated: 3/4.11.2004 of the Managing Director, Karnataka Power Corporation Limited.

**PREAMBLE:**

The Managing Director, Karnataka Power Corporation Limited in his letter dated 4.11.2004 read at above has reported that Karnataka Power Corporation proposes to establish two bio-mass gasifier-based power projects at Bethamangala, Kolar District 426 KWe capacity and Kushalnagar, Kodagu District 107 KWe capacity to meet the power requirements of the drinking water supply schemes at Bethamangala and Kushalnagar. The technology will be provided by Indian Institute of Science. The charges for the power supplied to the water supply schemes will be paid by KUWSDB. Surplus power will be supplied to the grid.

2. The cost of the Bethamangala project is estimated to be Rs.158 lakhs and the cost of the Kushalnagar project is Rs.45.00 lakhs i.e. the total cost of the two projects is Rs.203.00 lakhs. Out of Rs.203.00 lakhs, MNES subsidy will be Rs.81.476 lakhs and KPCL will contribute Rs.121.524 lakhs.

3. These are demonstration projects and Govt. support these because (1) they utilise the promising technology of power generation through bio-mass gasifier and (2) they will provide assured power to drinking water supply schemes.

4. Hence, the following order.

**GOVERNMENT ORDER No. EN 376 NCE 2004, Bangalore, Dated: 23rd November 2004**

5. Government are pleased to accord approval to Karnataka Power Corporation Limited to set up two bio-mass gasifier-based power projects at Bethamangala, Kolar District 426 KWe capacity and Kushalnagar, Kodagu District 107 KWe capacity and to supply surplus power to the grid.

6. The question of exemption from payment of electricity tax on auxiliary consumption and exemption from wheeling and banking charges will be examined separately.

By Order and in the Name of the Governor of Karnataka,

**K.L. JAYARAM**

P.R. 1307 Under Secretary to Government, Energy Department.

**Subject:** Transfer of 2.4 M.W. Wind Power Capacity in favour of M/s S.E. Investments Limited, Delhi-orders relating to.

**Read:**
1. Government Order No. DE 98 NCE 2000, dated: 10.7.2000.
2. Letter No. KRED/08/SEIL/2004/2008, dated: 4.11.2004, received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated: 10.7.2000 read at (1) above sanction was accorded for implementation of 149 M.W. capacity Wind Power Project at Chitradurga District to M/s Enercon India Limited.

(2) Now, the Managing Director, Karnataka Renewable Energy Development Limited, Bangalore, in his letter dated: 4.11.2004 read at (2) above, has recommended to Government for transfer of 2.4 M.W. Wind Power capacity in favour of M/s S.E. Investments Limited, Delhi, at survey No. 101, 1 & 1 of Ittegehalli Myakenahalli & Katheholle Villages of Chitradurga district, from out of the sanctioned 149 M.W. capacity of M/s Enercon India Limited.

(3) The proposal has been examined and pass the following order:

**GOVERNMENT ORDER No. DE 384 NCE 2004, Bangalore, Dated: 18th November 2004**

(4) Government are pleased to accord sanction for transfer of 2.4 M.W. Wind Power capacity in favour of M/s S.E. Investments Limited, Delhi in the schedule indicated below, from out of 149 M.W. capacity of M/s Enercon India Limited allotted in the Government order dated: 10.7.2000.

**SCHEDULE**

| Sl.No. | Village Name | Taluk/District | Survey Number | Extent of area (ha) |
|---|---|---|---|---|
| 1 | Ittegehalli | Hiriyur/Chitradurga | 101 | 1.68 |
| 2 | Myakenahalli | Hiriyur/Chitradurga | 1 | 0.56 |
| 3 | Katheholle | Hiriyur/Chitradurga | 1 | 2.16 |
| | | | **Total** | **4.4** |

(5) The terms and conditions of the original allotment made in the Government order read at (1) above are **IPSOFACTO** applicable.

By Order and in the Name of the Governor of Karnataka,

**K.L. JAYARAM**

P.R. 1308 Under Secretary to Government, Energy Department.

**ಶಿಕ್ಷಣ ಸಚಿವಾಲಯ**

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ಕೈಗೊಂಡ ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯಮಾಪನ ಕಾರ್ಯಕ್ಕೆ ಸೇವಾ ಶುಲ್ಕ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 63 ಎಂ.ಎಂ.ಎಸ್. 2004, ದಿನಾಂಕ: 9.8.2004.

2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಎಂ3/ಅ.ದಾ/ಮೌಮಾ/2003-04, ದಿನಾಂಕ: 8.10.2004.

**ಪ್ರಸ್ತಾವನೆ:**

ಕರ್ನಾಟಕದಲ್ಲಿ ಜಾರಿಯಲ್ಲಿರುವ ಅಕ್ಷರ ದಾಸೋಹ ಮಧ್ಯಾಹ್ನ ಬಿಸಿಊಟ ಕಾರ್ಯಕ್ರಮದ ಮೌಲ್ಯಮಾಪನವನ್ನು ಕೈಗೊಳ್ಳಬೇಕೆಂದು ಮೇಲೆ (1) ರಲ್ಲಿ ಓದಲಾದ ದಿನಾಂಕ: 9.8.2004ರ ಸರ್ಕಾರಿ ಆದೇಶದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರಿಗೆ ನಿರ್ದೇಶನಗಳನ್ನು ನೀಡಲಾಗಿತ್ತು. ಆಯುಕ್ತರು, ಮೇಲೆ (2) ರಲ್ಲಿ ಓದಲಾದ ದಿನಾಂಕ: 8.10.2004ರ ತಮ್ಮ ಪತ್ರದಲ್ಲಿ ಈ ಬಗ್ಗೆ ಪ್ರಸ್ತಾವನೆಗಳನ್ನು ಆಹ್ವಾನಿಸಿ ಅದರನ್ವಯ ಬಂದ ಪ್ರಸ್ತಾವನೆಗಳನ್ನು ಪರಿಶೀಲಿಸಲಾಗಿ ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ (ಶ್ರೀಮತಿ ರಮಾನಾಯಕ್) ಇವರು ಮೌಲ್ಯಮಾಪನಕ್ಕಾಗಿ ಅತ್ಯಂತ ಕಡಿಮೆ ಸೇವಾ ಶುಲ್ಕ ರೂ.17.50 ಲಕ್ಷ ರೂ.ಗಳನ್ನು ನಮೂದಿಸಿದ್ದು, ಈ ವೆಚ್ಚದಲ್ಲಿ ಮೌಲ್ಯ ಮಾಪನ ಕಾರ್ಯವನ್ನು ಸದರೀ ಸಂಸ್ಥೆಯಿಂದ ಕೈಗೊಳ್ಳಲು ಸರ್ಕಾರದ ಅನುಮತಿ ನೀಡುವಂತೆ ಕೋರಿದ್ದಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಎಂಎಂಎಸ್ 2004, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2004**

**(ಇಡಿ 63 ಸ್ಕೀಮರ (ಯೂನಿಕ್) 2004, ದಿನಾಂಕ: 23ನೇ ನವೆಂಬರ್ 2004)**

ಸರ್ಕಾರವು ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯ ಮಾಪನವನ್ನು ರಾಜ್ಯದ ಎಲ್ಲಾ 27 ಜಿಲ್ಲೆಗಳಲ್ಲಿ ಸಮರ್ಪಕವಾಗಿ ಕೈಗೊಳ್ಳಲು ರೂ.17.50 ಲಕ್ಷ ರೂ. ಗಳನ್ನು (ಹದಿನೇಳು ಲಕ್ಷ ಐವತ್ತು ಸಾವಿರ ರೂಪಾಯಿಗಳು) ಮಾತ್ರ ಈ ಸಂಬಂಧದ ಸೇವಾ ಶುಲ್ಕವನ್ನಾಗಿ ಮಂಜೂರು ಮಾಡಿದೆ. ಈ ಮೌಲ್ಯಮಾಪನವನ್ನು ಧಾರವಾಡ ಕೃಷಿ ವಿಶ್ವವಿದ್ಯಾಲಯದ (ಶ್ರೀಮತಿ ರಮಾ ನಾಯಕ್) ಮೂಲಕ ಕೈಗೊಳ್ಳತಕ್ಕದ್ದು. ಈ ವೆಚ್ಚವನ್ನು ಅಕ್ಷರ ದಾಸೋಹ ಕಾರ್ಯಕ್ರಮಕ್ಕಾಗಿ 2004-05ನೇ ಸಾಲಿನಲ್ಲಿ ಮೀಸಲಾದ ಹಣದಲ್ಲೇ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ. ಸಂಖ್ಯೆ: ಶಿಇ 702 ಐಎಫ್(ಬಿಎ) 2004, ದಿನಾಂಕ: 19.10.2004 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1309 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಲೋಕೋಪಯೋಗಿ ಸಚಿವಾಲಯ**

**ಸೇರ್ಪಡೆ ಸಂಖ್ಯೆ: ಲೋಇ 81 ಸೇಸಎ 2004, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2004**

ಭಾರತದ ಸಂವಿಧಾನದ 85ನೇ ತಿದ್ದುಪಡಿಯನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ ಕರ್ನಾಟಕ ಸರ್ಕಾರವು ದಿನಾಂಕ: 27.4.1978 ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಧಿಕಾರಿ : ನೌಕರರಿಗೂ ಪದೋನ್ನತಿಯೊಂದಿಗೆ ಜೇಷ್ಠತೆಯನ್ನು ನೀಡಬೇಕೆಂದು ಅವಕಾಶ ಕಲ್ಪಿಸಿ ಎರಡು ಸುಗ್ರಿವಾಜ್ಞೆಗಳನ್ನು ಜಾರಿಗೆ ತಂದ ಪರಿಣಾಮವಾಗಿ ಬಡಪ್ಪನವರ್‌ರವರ ಪ್ರಕರಣದ ಪ್ರಕಾರ ತಯಾರಿಸಿ ಹೊರಡಿಸಿದ್ದ

ಲೋಕೋಪಯೋಗಿ ಮತ್ತು ಜಲ ಸಂಪನ್ಮೂಲ ಇಲಾಖೆಗೆ ಸೇರಿದ ಇಂಜಿನಿಯರುಗಳ ಜೇಷ್ಠತಾ ಪಟ್ಟಿಗಳನ್ನು ಪರಿಷ್ಕರಿಸುವ ಅಗತ್ಯತೆ ಉಂಟಾಗಿದ್ದರಿಂದ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 11.4.2002ರ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 132 ಎಸ್‌ಎಜಿ 2002 ರಲ್ಲಿ ಪ್ರಕಟಿಸಲಾಗಿದೆ.

ದಿನಾಂಕ: 11.4.2002ರ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎಂ.ಹೆಚ್. ಭೀಮಕ್ಕನವರ ಜೇಷ್ಠತೆ ಕ್ರಮ ಸಂಖ್ಯೆ: 2434 ರಲ್ಲಿ ಪತಿಬಿಂಬಿತರಾಗಿದ್ದು, ಈ ಜೇಷ್ಠತೆಯನ್ನು ಗೊತ್ತುಪಡಿಸಿರುವ ಬಗ್ಗೆ ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 8574:2003ನ್ನು ಸಲ್ಲಿಸಿ ಅಧಿಸೂಚನೆ ಸಂಖ್ಯೆ: ಲೋಇ 209 ಸೇಸಎ 96, ದಿನಾಂಕ: 3.12.1997 ಮತ್ತು ಅಧಿಸೂಚನೆ ಸಂಖ್ಯೆ: ಲೋಇ 240 ಸೇಸಎ 2001, ದಿನಾಂಕ: 20.8.2001 ರಲ್ಲಿ ಪ್ರಕಟಿಸಲಾಗಿದ್ದ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ಜೇಷ್ಠತಾ ಪಟ್ಟಿಗಳನ್ನು ಆಧರಿಸಿ, ತಮ್ಮ ಜೇಷ್ಠತೆಯನ್ನು ಪುನರ್ ನಿಗದಿಪಡಿಸಬೇಕೆಂದು ಕೋರಿದ್ದರು. ದಿನಾಂಕ: 13.11.2003 ರಂದು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಸದರಿ ಅರ್ಜಿಯನ್ನು ಪುರಸ್ಕರಿಸಿ, ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರ ಮನವಿಯ ಮೇಲೆ ಕಾನೂನು ರೀತ್ಯಾ ಕ್ರಮವಹಿಸಬೇಕೆಂದು ತೀರ್ಪು ನೀಡಿದೆ.

ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರು ಮೇಲ್ಕಂಡ ತೀರ್ಪಿನ ಪ್ರತಿಯನ್ನು ನೀಡುತ್ತಾ ದಿನಾಂಕ: 7.5.2004 ರಂದು ಮನವಿ ಸಲ್ಲಿಸಿ, ತಮ್ಮ ಜೇಷ್ಠತೆಯನ್ನು ಅಧಿಸೂಚನೆ ಸಂಖ್ಯೆ: PWD 132 SAG 2002 ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 1813ಎ ಯನ್ನಾಗಿ ಮಾರ್ಪಡಿಸಿ ಪುನರ್ ನಿಗದಿಪಡಿಸುವಂತೆ ಕೋರಿರುತ್ತಾರೆ.

ಈ ಸೇರ್ಪಡೆ ಮಾಡಿದಲ್ಲಿ ಸರ್ವೋಚ್ಛ ನ್ಯಾಯಾಲಯದ ಆದೇಶದಂತೆ ಜೇಷ್ಠತೆಯನ್ನು ಕಾಪಾಡಿಕೊಂಡಿರುವ ವ್ಯಕ್ತಿಗಳಿಗೆ ಯಾವುದೇ ಬಾಧಕ ಆಗುವುದಿಲ್ಲ ಮತ್ತು ಸರ್ವೋಚ್ಛ ನ್ಯಾಯಾಲಯದ ಮಧ್ಯಂತರ ಆದೇಶದ ಉಲ್ಲಂಘನೆ ಆಗುವುದಿಲ್ಲ ಎಂಬುದನ್ನು ಪರಿಗಣಿಸಿ ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರು ಸಲ್ಲಿಸಿರುವ ಅರ್ಜಿ ಹಾಗೂ ಕೆ.ಎ.ಟಿ. ಆದೇಶದಂತೆ ಈ ಕ್ರಮವನ್ನು ಯಾವುದೇ ಪೂರ್ವ ನಿದರ್ಶನವಾಗಿ ಇಟ್ಟುಕೊಳ್ಳಬಾರದೆಂಬ ಷರತ್ತಿಗೆ ಒಳಪಟ್ಟು ಒಂದು ವಿಶೇಷ ಸಂದರ್ಭವನ್ನಾಗಿ ಪರಿಗಣಿಸಿ ಮತ್ತು ಸರ್ವೋಚ್ಛ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಒಳಪಟ್ಟು ಸರ್ಕಾರದ ಅಧಿಸೂಚನೆ ಸಂಖ್ಯೆ: PWD 132 SAG 2002 ರಲ್ಲಿ ದಿನಾಂಕ: 11.4.2002 ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 1813 ಮತ್ತು 1814 ನಡುವೆ ಕ್ರಮ ಸಂಖ್ಯೆ: 1813ಎ ನ್ನಾಗಿ ಕೆಳಕಂಡಂತೆ ಸೇರ್ಪಡೆ ಮಾಡಲು ಹಾಗೂ ತತ್‌ಪರಿಣಾಮವಾಗಿ ಇದೇ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ: 2434 ರಲ್ಲಿರುವ ಶ್ರೀ ಎಂ.ಹೆಚ್. ಭೀಮಕ್ಕನವರ್‌ರವರಿಗೆ ಸಂಬಂಧಿಸಿದ ಕಾಲಂ ಅನ್ನು ಕೈಬಿಡಲು ಪ್ರಸ್ತಾಪಿಸಿದೆ.

| AEE Grd. No. | List No. | AE Grd. No. | Name of the Engineer | SC/ ST | Date of Birth | AEE Promotion Date | AEE Eligibility Date | Rem-arks |
|---|---|---|---|---|---|---|---|---|
| 1813A | 2 | 4320 | M.H. Bhimakkanavar | ST | 1-3-58 | 30-3-94 | 1-7-95 | |

ಮೇಲ್ಕಂಡ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-1)ರ ವೃಂದದಲ್ಲಿ ಅರ್ಹತಾ ದಿನಾಂಕ: ಹಾಗೂ ಜೇಷ್ಠತಾ ಪಟ್ಟಿಗಳಲ್ಲಿ ಕ್ರಮ ಸಂಖ್ಯೆ: 1813ಎ ಆಗಿ ಸೇರ್ಪಡೆ ಮಾಡುವುದರಿಂದ ಬಾಧಿತರಾಗುವ ಯಾವುದೇ ಅಧಿಕಾರಿಯು ತಮ್ಮ ಆಕ್ಷೇಪಣೆ : ಸಲಹೆಗಳಿದ್ದಲ್ಲಿ ಅದನ್ನು ಸಮರ್ಥಿಸುವಂತಹ ದೃಢೀಕೃತ ದಾಖಲಾತಿಗಳೊಂದಿಗೆ ಈ ತಿದ್ದುಪಡಿಯು ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬಹುಮಹಡಿಗಳ ಕಟ್ಟಡ, 5ನೇ ಹಂತ, 3ನೇ ಮಹಡಿ, ಬೆಂಗಳೂರು ಇವರಿಗೆ ಸಲ್ಲಿಸುವಂತೆ ಕೋರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಲಕ್ಷ್ಮೀನಾರಾಯಣ**

ಪಿ.ಆರ್. 1310 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಎ).

## ಜಲ ಸಂಪನ್ಮೂಲ ಸಚಿವಾಲಯ

### ತಿದ್ದುಪಡಿ ಆದೇಶ ಸಂಖ್ಯೆ: ಸನೀಇ 109 ಕೆಜಿದು 2004, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2004

ಚಾಮರಾಜನಗರ ಜಿಲ್ಲೆ ಹಾಗೂ ತಾಲ್ಲೂಕಿನ ನಾಗವಳ್ಳಿ ಕೆರೆಯನ್ನು ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ವಹಿಸಲಾಗಿರುವ ವಿಷಯಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ಆದೇಶ ಸಂಖ್ಯೆ: ಸನೀಇ 109 ಕೆಜಿದು 2004, ದಿನಾಂಕ: 28.09.2004ರ ಆದೇಶ ಭಾಗದ ಕ್ರ.ಸಂ. 3 ಮತ್ತು 4 ರಲ್ಲಿಯ ಷರತ್ತುಗಳನ್ನು ಹಿಂತೆಗೆದುಕೊಳ್ಳಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್. ಉದಯ ಕುಮಾರ್**

ಪಿ.ಆರ್. 1312 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## WATER RESOURCES SECRETARIAT

### CORRIGENDUM No. MID 24 DAMAPRA 2003, Dated: 3rd November 2004

In the Notification No. MID 24 DAMAPRA 2003, dated: 28.10.2004 issued by this Department, for the words 'with the powers and such duties', the words 'with such powers and such duties' shall be substituted.

By Order and in the Name of the Governor of Karnataka,

**M.N. MANJUNATHA**

P.R. 1313 Under Secretary to Government,
Water Resources Department (Minor Irrigation).

**ಶಿಕ್ಷಣ ಸಚಿವಾಲಯ**

**ವಿಷಯ:** ವಿದ್ಯಾ ವಿಕಾಸ ಯೋಜನೆಯಡಿಯಲ್ಲಿ ಉಚಿತ ಸಮವಸ್ತ್ರಗಳ ಸರಬರಾಜಿಗಾಗಿ ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮಕ್ಕೆ 1415 ಲಕ್ಷ ರೂ.ಗಳ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 59 ಯೋಯೋಕ 2004, ದಿನಾಂಕ: 3.7.2004.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 59 ಯೋಯೋಕ 2004, ದಿನಾಂಕ: 18.8.2004.
3. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಅ4(1) ವಿವಿಯೋ/ಉ.ಸ.8/2004-05 ದಿನಾಂಕ: 16.10.2004.

**ಪ್ರಸ್ತಾವನೆ:**

ವಿದ್ಯಾ ವಿಕಾಸ ಯೋಜನೆಯಡಿ 2004-05ನೇ ಸಾಲಿನಲ್ಲಿ ಸರ್ಕಾರಿ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳಿಗೆ ಉಚಿತ ಸಮವಸ್ತ್ರ ಒದಗಿಸುವ ಕಾರ್ಯಕ್ರಮವನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 3.7.2004ರ ಸರ್ಕಾರಿ ಆದೇಶದಲ್ಲಿ ಅನುಷ್ಠಾನಗೊಳಿಸಿ ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮಗಳ ಮೂಲಕ 75:25ರ ಅನುಪಾತದಲ್ಲಿ ಬಟ್ಟೆ ಖರೀದಿಸಲು ಮಂಜೂರಾತಿ ನೀಡಲಾಯಿತು. ಮೇಲೆ (2) ರಲ್ಲಿ ಓದಲಾದ ದಿನಾಂಕ: 18.8.2004ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮಕ್ಕೆ 11 ಕೋಟಿ ರೂ.ಗಳ ಮುಂಗಡವನ್ನು ಬಿಡುಗಡೆ ಮಾಡಲಾಯಿತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (3) ರಲ್ಲಿ ಓದಲಾದ ದಿನಾಂಕ: 16.10.2004ರ ತಮ್ಮ ಪತ್ರದಲ್ಲಿ ನಿಗಮವು ನಿಗದಿಪಡಿಸಿದ 35.21 ಲಕ್ಷ ಸೆಟ್‌ಗಳ ಪೈಕಿ 15.11 ಲಕ್ಷ ಸೆಟ್‌ಗಳನ್ನು ಸರಬರಾಜು ಮಾಡಿದ್ದು, ನೂಲು ಸರಬರಾಜು ಮಾಡುವ ಸಂಸ್ಥೆಗಳಿಗೆ ಪಾವತಿ ಮಾಡಲು ಅನುದಾನ ಬಿಡುಗಡೆಗೆ ಒತ್ತಾಯಿಸುತ್ತಿರುವುದರಿಂದ ನಿಗಮಕ್ಕೆ 1415 ಲಕ್ಷ ರೂ.ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 271 ಯೋಯೋಕಾ 2004, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2004**

**(ಇಡಿ 62 ಸ್ಕೀಮರ (ಯೂನಿಕ್) 2004, ದಿನಾಂಕ: 23ನೇ ನವೆಂಬರ್ 2004)**

2004-05ನೇ ಸಾಲಿಗೆ ಸರ್ಕಾರವು ವಿದ್ಯಾ ವಿಕಾಸ ಯೋಜನೆಯಡಿ ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮಕ್ಕೆ ಸಮವಸ್ತ್ರ ಬಟ್ಟೆಗಳನ್ನು ಸರಬರಾಜು ಮಾಡಿದ ಸಂಬಂಧ 1415.00 ಲಕ್ಷ ರೂ.ಗಳನ್ನು (ಒಂದು ಸಾವಿರ ನಾಲ್ಕು ನೂರ ಹದಿನೈದು ಲಕ್ಷ ರೂ.ಗಳು) ಮಾತ್ರ ಬಿಡುಗಡೆ ಮಾಡಿದೆ. ಈ ವೆಚ್ಚವನ್ನು 2004-05ನೇ ಸಾಲಿನ ಲೆಕ್ಕ ಶೀರ್ಷಿಕೆ 2202-01-109-0-03-221 ಸಾಮಗ್ರಿ ಮತ್ತು ಸರಬರಾಜು ಇದರಡಿಯಲ್ಲಿ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಭರಿಸತಕ್ಕದ್ದು. ಈ ಮುಂಗಡವನ್ನು ಮುಂದಿನ ಪಾವತಿಗಳಲ್ಲಿ ಸದರಿ ಸಂಸ್ಥೆಯು ಸರಬರಾಜು ಮಾಡುವ ಬಟ್ಟೆಗಳ ಮೌಲ್ಯಕ್ಕೆ ಸರಿದೂಗಿಸತಕ್ಕದ್ದು.

ಬಿಡುಗಡೆ ಮಾಡಿರುವ ಹಣಕ್ಕೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ಇವರು ಹಣ ಪಾವತಿ ರಸೀದಿ ತಯಾರಿಸಿ ಅದಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಿಂದ ಮೇಲುರುಜು ಹೊಂದಿ ಹಣವನ್ನು ಪಡೆಯತಕ್ಕದ್ದು.

ಸದರಿ ಸಂಸ್ಥೆಯು ಸರಬರಾಜು ಮಾಡುವ ಬಟ್ಟೆಗಳ ಗುಣಮಟ್ಟವನ್ನು ಕಾಯ್ದುಕೊಳ್ಳುವ ಬಗ್ಗೆ ನಿಗಾವಹಿಸತಕ್ಕದ್ದು ಮತ್ತು ಬಟ್ಟೆಗಳ ಸರಬರಾಜು ಕುರಿತಂತೆ ಮೌಲ್ಯಮಾಪನ ವರದಿಯಲ್ಲಿ ಕಂಡು ಬಂದಿರುವ ಲೋಪಗಳನ್ನು ಸರಿಪಡಿಸಲೂ ಅಗತ್ಯ ಕ್ರಮವನ್ನು ಕೂಡಲೇ ಕೈಗೊಳ್ಳುವುದು. ಸಮವಸ್ತ್ರ ಬಟ್ಟೆಗಳು ಸಕಾಲದಲ್ಲಿ ಸರಬರಾಜಾಗುತ್ತಿರುವ ಬಗ್ಗೆ ಪ್ರಗತಿಯನ್ನು ಸಾರ್ವಜನಿಕ ಶಿಕ್ಷಣ ಆಯುಕ್ತರು ಪರಿಶೀಲಿಸತಕ್ಕದ್ದು.

ಆರ್ಥಿಕ ಇಲಾಖೆಯ ಸಹಮತಿಯನ್ನು ಅ.ಟಿ. ಸಂಖ್ಯೆ: ಆಇ 997 ವೆಚ್ಚ-8/2004 ದಿನಾಂಕ: 20.11.2004 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1311 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಜವರಯ್ಯ (ನಿವೃತ್ತ) ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇ ಲಾಖೆ, ಶ್ರೀ ಬಾಷಾ ಷರೀಫ್ (ನಿವೃತ್ತ) ಅಧೀಕ್ಷಕರು ಹಾಗೂ ಶ್ರೀ ಡಿ.ಕೆ.ದೊರೆಸ್ವಾಮಿ (ನಿವೃತ್ತ) ದ್ವಿತೀಯ ದರ್ಜೆ ಸಹಾಯಕರವರುಗಳ ವಿರುದ್ಧ 1999-2000 ನೇ ಸಾಲಿನಲ್ಲಿ ಚಾಮರಾಜನಗರ ಜಿಲ್ಲಾ ಪಂಚಾಯತ್‌ನಲ್ಲಿ ಪೀಠೋಪಕರಣ ಖರೀದಿಯಲ್ಲಿನ ಅವ್ಯವಹಾರಗಳ ಬಗ್ಗೆ ಜಂಟಿ ಇ ಲಾಖಾ ವಿಚಾರಣೆ-ದಂಡನೆ ವಿಧಿಸಿ ಆರೋಪ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 46 ಎಸ್‌ಇ ಎನ್ 2001 ದಿನಾಂಕ:26-3-2001.
2. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 46 ಎಸ್‌ಇ ಎನ್ 2001 ದಿನಾಂಕ:25-9-2001 ಮತ್ತು 26-9-2001.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 46 ಎಸ್‌ಇ ಎನ್ 2001 ದಿನಾಂಕ:18-1-2002.
4. ಸರ್ಕಾರಿ ಆದೇಶ ಕ್ರಮಾಂಕ:ಸಿಆಸುಇ 46 ಎಸ್‌ಇ ಎನ್ 2001 ದಿನಾಂಕ: 27-3-2002.
5. ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಅವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಪಿಆರ್‌ಎಸ್‌ಸಿಆರ್.6.2002-03 ದಿನಾಂಕ:15-9-2003 ವಿಚಾರಣಾ ವರದಿ.
6. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಸಿಆಸುಇ 46 ಎಸ್‌ಇ ಎನ್ 2001 ದಿನಾಂಕ: 8-12-2003 ಮತ್ತು 14-10-2003.
7. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 46 ಎಸ್‌ಇ ಎನ್ 2001 ದಿನಾಂಕ:6-8-2004.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲಾ ಪಂಚಾಯತ್‌ನಲ್ಲಿ 1999-2000ರ ಸಾಲಿನಲ್ಲಿ ಶ್ರೀ ಆರ್.ಜೆ.ವಾಲೀಕರ್ ಕೆ.ಎ.ಎಸ್.ರವರು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾಗಿ ಶ್ರೀ ಜವರಯ್ಯ ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇ ಲಾಖೆ, ಶ್ರೀ ಮುರಳಿ ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇ ಲಾಖೆ, ಶ್ರೀ ಮಹದೇವಪ್ಪ ಮತ್ತು ಶ್ರೀ ಬಾಷಾ ಷರೀಫ್ ಅಧೀಕ್ಷಕರಾಗಿ, ಶ್ರೀ ಶಶಿಧರ ಶರ್ಮ ಮತ್ತು ಶ್ರೀ ಡಿ.ಕೆ.ದೊರೆಸ್ವಾಮಿ ರವರು

ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಅನುದಾನ ಲಭ್ಯತೆ ಇಲ್ಲದಿದ್ದರೂ, ವಿಧಿವಿಧಾನಗಳನ್ನು ಪಾಲಿಸದೆ ಪೀಠೋಪಕರಣ ಹಾಗೂ ಲೇಖನ ಸಾಮಗ್ರಿಗಳನ್ನು ಕಾನೂನು ಬಾಹಿರವಾಗಿ ಸರ್ಕಾರದಿಂದ ಅಥವಾ ಯಾವುದೇ ಇಲಾಖೆಯಿಂದ ಆದೇಶ ಇಲ್ಲದಿದ್ದರೂ ಸಹ ಒಟ್ಟು 11 ಡಿ.ಸಿ.ಬಿಲ್ಲುಗಳ ಮೂಲಕ ರೂ.1,11,51,335-00 ವೆಚ್ಚ ಮಾಡಿ ಖರೀದಿಸುವಲ್ಲಿ ಅಕ್ರಮ ಅವ್ಯವಹಾರಗಳಲ್ಲಿ ಭಾಗಿಯಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದಂತಹ ಆರೋಪಗಳಿಗಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ:26-3-2001 ರ ಆದೇಶದಲ್ಲಿ ಅಮಾನತ್ತಿನಲ್ಲಿಡಲಾಯಿತು. ಹಾಗೂ ಮೇಲೆ (2) ರಲ್ಲಿ ಓದಲಾದ ದಿನಾಂಕ: 25-9-2001ರ ನೋಟೀಸ್ ಗಳನ್ನು ಹೊರಡಿಸುವ ಮೂಲಕ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಮೇಲೆ ಉಲ್ಲೇಖ(3) ರಲ್ಲಿ ಓದಲಾದ ದಿನಾಂಕ: 18-1-2002ರ ಸರ್ಕಾರಿ ಆದೇಶದಲ್ಲಿ ಮಹಾ ನಿರ್ದೇಶಕರು ಆಡಳಿತ ತರಬೇತಿ ಸಂಸ್ಥೆ ಮೈಸೂರು ರವರನ್ನು ವಿಚಾರಣಾಧಿಕಾರಿಗಳನ್ನಾಗಿಯೂ, ಮೈಸೂರು ವಿಭಾಗಾಧಿಕಾರಿಗಳ ರಾಜ್ಯ ಪತ್ರಾಂಕಿತ ಸಹಾಯಕರನ್ನು ಮಂಡನಾಧಿಕಾರಿಗಳನ್ನಾಗಿಯೂ ನೇಮಿಸಲಾಯಿತು ಹಾಗೂ ಮೇಲೆ ಉಲ್ಲೇಖ(4) ರ ದಿನಾಂಕ:27-3-2002ರ ಆದೇಶದಲ್ಲಿ ವಿಚಾರಣೆಯನ್ನು ಬಾಕಿ ಇಟ್ಟು ಅಮಾನತ್ತನ್ನು ರದ್ದುಗೊಳಿಸಿ, ಸೇವೆಗೆ ತೆಗೆದುಕೊಳ್ಳಲಾಯಿತು.

ವಿಚಾರಣೆ ನಡೆಸಿರುವ ವಿಚಾರಣಾಧಿಕಾರಿಗಳು ಮೇಲೆ ಉಲ್ಲೇಖ (5) ರಲ್ಲಿ ಓದಲಾದ ದಿನಾಂಕ:15-9-2003 ರ ವಿಚಾರಣಾ ವರದಿ ಸಲ್ಲಿಸಿ ಶ್ರೀ ಮುರಳಿ, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವಿರುದ್ಧ ಹೊರಿಸಲಾಗಿದ್ದ ಆರೋಪಗಳನ್ನು ಹೊರತುಪಡಿಸಿ, ಉಳಿದ ಎಲ್ಲಾ ಅಧಿಕಾರಿ ನೌಕರರ ಮೇಲೆ ಹೊರಿಸಲಾದ ಆರೋಪಗಳು ಸಾಬೀತಾಗಿರುತ್ತದೆಂದು ವರದಿ ಮಾಡಿರುತ್ತಾರೆ.

ಮೇಲೆ ಉಲ್ಲೇಖ(7) ರಲ್ಲಿ ಓದಲಾದ ದಿನಾಂಕ:6-8-2004 ರ ಸರ್ಕಾರಿ ಆದೇಶದಲ್ಲಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಆರ್.ಜೆ.ವಾಲಿಕರ್, ಕೆ.ಎ.ಎಸ್.ಅಧಿಕಾರಿ, ಶ್ರೀ ಮಹದೇವಪ್ಪ ಅಧೀಕ್ಷಕರು, ಶ್ರೀ ಶಶಿಧರ ಶರ್ಮ, ದ್ವಿತೀಯ ದರ್ಜೆ ಸಹಾಯಕರು ರವರುಗಳಿಗೆ ದಂಡನೆ ವಿಧಿಸಿ ಆದೇಶ ಹೊರಡಿಸಲಾಗಿದೆ. ಹಾಗೂ 8-12-2003 ರ ಆದೇಶಗಳಲ್ಲಿ ಶ್ರೀ ಮುರಳಿ, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕ ಪತ್ರ ಇಲಾಖೆ, ಇ ವರನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಉಳಿದ ನಿವೃತ್ತ ಆರೋಪಿತ ಅಧಿಕಾರಿ:ನೌಕರರುಗಳಾದ ಶ್ರೀ ಎಂ.ಜವರಯ್ಯ, ಶ್ರೀ ಬಾಷಾ ಷರೀಫ್ ಮತ್ತು ಶ್ರೀ ಡಿ.ಕೆ.ದೊರೆಸ್ವಾಮಿ ರವರುಗಳಿಗೆ 2ನೇ ಕಾರಣ ಕೇಳುವ ನೋಟೀಸ್ ಹೊರಡಿಸಿದ್ದು ಈ ಬಗ್ಗೆ ಶ್ರೀ ಎಂ.ಜವರಯ್ಯ ನಿವೃತ್ತ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ರವರು ಉತ್ತರಿಸಿರುವುದಿಲ್ಲ. ಆದರೆ ಶ್ರೀ ಬಾಷಾ ಷರೀಫ್, ನಿವೃತ್ತ ಅಧೀಕ್ಷಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಚಾಮರಾಜನಗರ, ಶ್ರೀ ಡಿ.ಕೆ.ದೊರೆಸ್ವಾಮಿ, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಬಾಲಕಿಯರ ಪದವಿಪೂರ್ವ ಕಾಲೇಜು, ಚಾಮರಾಜನಗರ ರವರುಗಳು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಮನವಿ ಮಾಡಿದ್ದಾರೆ.

ಈ ಬಗ್ಗೆ ವಿಚಾರಣಾ ವರದಿ ಹಾಗೂ ಆರೋಪಿತರ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಆರೋಪಿತರ ಉತ್ತರಗಳಲ್ಲಿ ಯಾವುದೇ ಸಮರ್ಥನೀಯ ಕಾರಣಗಳಿಲ್ಲದಿರುವುದನ್ನು ಮನಗಂಡು ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ಶಿಫಾರಸ್ಸನ್ನು ಒಪ್ಪಿಕೊಂಡು ಲೋಕಸೇವಾ ಆಯೋಗದ ಸಹಮತಿಯೊಂದಿಗೆ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 46 ಎಸ್ಇ ಎನ್ 2001 ಬೆಂಗಳೂರು ದಿನಾಂಕ: 8ನೇ ನವೆಂಬರ್ 2004**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು

1) ಶ್ರೀ ಎಂ.ಜವರಯ್ಯ, ನಿವೃತ್ತ ಡಿ.ಡಿ.ಪಿ.ಐ.ಚಾಮರಾಜನಗರ ರವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ.4,06,872 (ನಾಲ್ಕು ಲಕ್ಷ ಆರು ಸಾವಿರದ ಎಂಟನೂರ ಎಪ್ಪತ್ತೆರಡು ರೂಪಾಯಿಗಳು ಮಾತ್ರ) ಗಳನ್ನು ಅವರ ನಿವೃತ್ತಿ ಸೌಲಭ್ಯ ಗಳಿಂದ ವಸೂಲಿ ಮಾಡಲು ಹಾಗೂ ಮಾಸಿಕ ನಿವೃತ್ತಿ ವೇತನದಿಂದ ನಿರಂತರವಾಗಿ ರೂ.1000 (ಒಂದು ಸಾವಿರ ರೂ.ಗಳು ಮಾತ್ರ) ಗಳನ್ನು ಕಡಿತಗೊಳಿಸುವುದು.
2) ಶ್ರೀ ಬಾಷಾ ಷರೀಫ್ ನಿವೃತ್ತ ಅಧೀಕ್ಷಕರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ. 1,63,900 (ಒಂದು ಲಕ್ಷ ಅರವತ್ಮೂರು ಸಾವಿರದ ಒಂಬೈನೂರು ರೂಪಾಯಿಗಳನ್ನು) ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡುವುದು ಹಾಗೂ ಅವರ ಮಾಸಿಕ ವಿಶ್ರಾಂತಿ ವೇತನದಿಂದ ನಿರಂತರವಾಗಿ ರೂ.500 (ಐದನೂರ ರೂಪಾಯಿಗಳು ಮಾತ್ರ) ಗಳನ್ನು ಕಡಿತ ಗೊಳಿಸುವುದು.
3) ಶ್ರೀ ಡಿ.ಕೆ.ದೊರೆಸ್ವಾಮಿ, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು ಸಾರ್ವಜನಿಕ ಶಿಕ್ಷಣ ಇಲಾಖೆ ರವರ ಮಾಸಿಕ ನಿವೃತ್ತಿ ವೇತನದಿಂದ ನಿರಂತರವಾಗಿ ಮಾಸಿಕ ರೂ.500 (ಐದುನೂರು ರೂಪಾಯಿಗಳು ಮಾತ್ರ) ಗಳನ್ನು ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ,**

ಪಿ.ಆರ್. 1258 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಮಹಮ್ಮದ್‌ಗೌಸ್, ನಿವೃತ್ತ ಕೆ.ಎ.ಎಸ್.ಅಧಿಕಾರಿ ಮತ್ತು ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂಖ್ಯೆ:ಸಿಆಸುಇ 120 ಎಸ್ಇ ಎನ್ 2003 ದಿನಾಂಕ: 27.4.2004 ಮತ್ತು 28.4.2004.
2. ಶ್ರೀ ಮಹಮ್ಮದ್‌ಗೌಸ್ ಅವರ ದಿನಾಂಕ: 25.6.2004ರ ಲಿಖಿತ ಉತ್ತರ.
3. ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ಅವರ ದಿನಾಂಕ:1.7.2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಮಹಮ್ಮದ್‌ಗೌಸ್ ರವರು ಚಾಮರಾಜನಗರ ಜಿಲ್ಲಾಧಿಕಾರಿಗಳ ಕಛೇರಿ ಕೇಂದ್ರಸ್ಥಾನಿಕ ಸಹಾಯಕರಾಗಿ ಹಾಗೂ ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಚಾಮರಾಜನಗರ ತಾಲ್ಲೂಕು ಕಛೇರಿ ನೌಕರ ಶ್ರೀ ವೆಂಕಟಸ್ವಾಮಿ ರವರ ಮೂಲಕ ಕಂದಾಯ ಇಲಾಖೆಯ 15 ಮಂದಿ ನೌಕರರಿಂದ ಅವರುಗಳಿಗೆ ಜಮೀನು ಖರೀದಿಸಿ ನಿವೇಶನ ನೀಡುವ ಆಶ್ವಾಸನೆಯೊಂದಿಗೆ ಸುಮಾರು ರೂ.1,52,800/- ಗಳನ್ನು ಸಂಗ್ರಹಿಸಿ ಸ್ಟೇಟ್‌ಬ್ಯಾಂಕ್ ಆಫ್ ಇಂಡಿಯ ಉಳಿತಾಯ ಖಾತೆಗೆ ಜಮಾ ಮಾಡಿಸಿ, ನಿವೇಶನಗಳನ್ನು ಹಂಚದೆ, ಸಂಗ್ರಹಿಸಿದ್ದ ಮೊಬಲಗನ್ನು ಖಾಸಗಿ ವ್ಯವಹಾರಕ್ಕೆ ಬಳಸಿ ನೌಕರರನ್ನು ವಂಚಿಸಿದ ಆರೋಪಗಳಿಗಾಗಿ ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ಹಾಗೂ ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್ ರವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 27.04.2004 ಮತ್ತು 28.4.2004ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ

ಮೇಲೆ (2) ರಲ್ಲಿ ಓದಲಾದ ದಿನಾಂಕ:25.6.2004 ಮತ್ತು 1.7.2004 ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಅದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ:ಸಿಆಸುಇ 120 ಎಸ್ಇ ಎನ್ 2003 ಬೆಂಗಳೂರು, ದಿನಾಂಕ:19ನೇ ನವೆಂಬರ್ 2004.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13 ನ್ನು ಓದಿಕೊಂಡಂತೆ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಹಾಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಪಿ.ಸಿ.ಶರ್ಮ, ಶಿರಸ್ತೇದಾರ್, ಜಿಲ್ಲಾಧಿಕಾರಿಗಳ ಕಛೇರಿ ಚಾಮರಾಜನಗರ ರವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಹಾಗೂ ಕೆ.ಸಿ.ಎಸ್.ಆರ್.ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಮಹಮದ್‌ಗೌಸ್, ನಿವೃತ್ತ ಕೆ.ಎ.ಎಸ್.ಅಧಿಕಾರಿ ರವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಪಿ.ಸಿ.ದಯಾಪರಮೂರ್ತಿ,ನಿವೃತ್ತ ನ್ಯಾಯಾಧೀಶರು, ಇ ವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 03 ಸೇಇ ವಿ 96 ದಿನಾಂಕ: 24.4.1998 ರಂತೆ ರೂ.5000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇ ವಿ 2001 ದಿನಾಂಕ: 4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇ ತ್ಯಾದಿಗಳನ್ನು ಒದಗಿಸಲು ಬೆಂಗಳೂರು ನಗರ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯ ಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ,**

ಪಿ.ಆರ್. 1291 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇ ಲಾಖೆ, (ಸೇವೆಗಳು-3).

## LAW SECRETARIAT

**CORRIGENDUM No. LAW 22 LCM 2002, Bangalore, Dated: 27th November 2004**

The following shall be added as second para to the Notification of even number dated 27.9.2002 Sri H.M. Thimmarayappa is also appointed as Special Public Prosecutor to conduct the revision petitions number 319/04 & 320/04 before the Fast Track Court Hall No.8, Bangalore as well as in the cases arising out of the afore said Revision Petition numbers before the High Court of Karnataka, Bangalore.

The Karnataka Urban Water supply and Drainage Board shall bear the remuneration bill.

By Order and in the Name of the Governor of Karnataka,

**VINEETHA P. SHETTY**

P.R. 1315 I/c Asst. Solicitor & Ex-Officio
Under Secretary to Government, Law Department (Litigation-I).

## ಕಾನೂನು ಸಚಿವಾಲಯ

**ವಿಷಯ:** 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಹುಬ್ಬಳ್ಳಿ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 108 ಎಲ್‌ಸೀಇ 2003 ದಿನಾಂಕ: 23.12.2003.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಓಬಿ-2-367(11) 2004, ದಿನಾಂಕ: 26.10.2004.

**ಪ್ರಸ್ತಾವನೆ:**

2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ.), ಹುಬ್ಬಳ್ಳಿ ನ್ಯಾಯಾಲಯವನ್ನು ಸೃಜಿಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 22.12.2004ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯವನ್ನು ದಿನಾಂಕ: 23.12.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 107 ಎಲ್ಎಸಿ 2004, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಹುಬ್ಬಳ್ಳಿ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: **23.12.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.**

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 1316 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಕಾನೂನು ಇಲಾಖೆ (ಆಡಳಿತ-1).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ನಿರ್ಜೀವ ಮತ್ತು ಒಣಗಿದ ಬೊಂಬುಗಳನ್ನು ಸರಬರಾಜು ಮಾಡಲು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಕಾಲಾವಕಾಶ ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004, ದಿನಾಂಕ: 16.3.2004.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ದಿನಾಂಕ: 15/18.06.2004 ಕೆಎಫ್‌ಡಿಸಿ/ಎ5/ಡ್ರೈ ಬ್ಯಾಂಬೂ/04-05ರ ಪತ್ರ.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ರವರ ಪತ್ರ ದಿನಾಂಕ: 14.10.2004ರ ಸಂಖ್ಯೆ: ಎ7/ಬೊಂಬು/ಸಿಆರ್-280/2000-01.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004 ದಿನಾಂಕ: 16.3.2004 ರಲ್ಲಿ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಕೊಪ್ಪ ವಿಭಾಗದಿಂದ 7,000 ಮೆಟ್ರಿಕ್ ಟನ್‌ಗಳಷ್ಟು ಹೂ ಬಿಟ್ಟ ಮತ್ತು ಒಣಗಿದ ಬೊಂಬನ್ನು ಕತರಾವಣೆ ಮಾಡಿ ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ಒದಗಿಸಲು ಜೂನ್ 2004 ರವರೆಗೆ ಅನುಮತಿ ನೀಡಿ ಆದೇಶಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಇವರು ಮೇಲೆ (2) ರಲ್ಲಿ ಓದಲಾಗಿರುವ ಪತ್ರದಲ್ಲಿ ಕತರಾವಣೆ ಮಾಡುವ ಕೆಲಸವನ್ನು ಪ್ರಾರಂಭಿಸಲು ಸಾಕಷ್ಟು ವಿಳಂಬವಾದ ಕಾರಣ ಹಂಚಿಕೆ ಮಾಡಿರುವ ಪ್ರಮಾಣದ ಬೊಂಬನ್ನು ಜೂನ್ 2004 ರೊಳಗಾಗಿ ಕತರಾವಣೆ ಮಾಡಿ ಸಾಗಿಸಲು ಸಾಧ್ಯವಾಗದೇ ಇದ್ದುದರಿಂದ ನಿಗದಿತ ಪ್ರಮಾಣದ ಬೊಂಬನ್ನು ಕತರಾವಣೆ ಮಾಡಿ ಸಾಗಿಸಲು ದಿನಾಂಕ: 31.03.2005 ರವರೆಗೆ ಕಾಲಾವಕಾಶವನ್ನು ವಿಸ್ತರಿಸುವಂತೆ ಸರ್ಕಾರವನ್ನು ಕೋರಿರುವರು.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪ್ರಸ್ತಾವನೆಯನ್ನು ಅನುಮೋದಿಸುತ್ತಾ, ಸದರಿ ನಿಗಮಕ್ಕೆ ಹಂಚಿಕೆ ಮಾಡಿರುವ 7000 ಮೆ. ಟನ್ ಬೊಂಬನ್ನು ಕತರಾವಣೆ ಮಾಡಿ ಸಾಗಾಣಿಕೆ ಮಾಡಲು 31.03.2005 ರವರೆಗೆ ಕಾಲಾವಕಾಶವನ್ನು ವಿಸ್ತರಿಸಿ ಆದೇಶ ನೀಡುವಂತೆ ಸರ್ಕಾರವನ್ನು ಕೋರಿರುವರು. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004 (ಭಾ), ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಮತ್ತೆ ಕಾಲಾವಕಾಶವನ್ನು ವಿಸ್ತರಿಸದಿರುವ ಷರತ್ತಿಗೆ ಒಳಪಟ್ಟು, ಕೊಪ್ಪ ವಿಭಾಗದಿಂದ, ಈಗಾಗಲೇ ಹಂಚಿಕೆ ಮಾಡಿರುವ 7000 ಮೆ.ಟನ್ ಬೊಂಬನ್ನು ಕತರಾವಣೆ ಮಾಡಿ ಸಾಗಾಣಿಕೆ ಮಾಡಲು ಡಿಸೆಂಬರ್ 2004ರ ಅಂತ್ಯದವರೆಗೆ ಮಾತ್ರ ಕಾಲಾವಕಾಶವನ್ನು ವಿಸ್ತರಿಸಿ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್. 1318 ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಕಾರಾಗೃಹಗಳ ಇಲಾಖೆಯಲ್ಲಿನ ಚೀಫ್ ಸೂಪರಿಂಟೆಂಡೆಂಟ್ ಆಫ್ ಸೆಂಟ್ರಲ್ ಪ್ರಿಸನ್ಸ್ (ಕೇಂದ್ರ ಕಾರಾಗೃಹಗಳ ಮುಖ್ಯ ಅಧೀಕ್ಷಕರು) ಹುದ್ದೆಗೆ ಕಾರ್ಯ ಹಂಚಿಕೆ ನಿಗದಿಪಡಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಇ4:ಸಿಆರ್-57:2003, ದಿನಾಂಕ: 25.10.2003.
2. ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಇ4:ಸಿಆರ್-44:2004, ದಿನಾಂಕ: 30.9.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 25.10.2003ರ ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರು ಕಾರಾಗೃಹಗಳ ಇಲಾಖೆಯಲ್ಲಿನ ಕೇಂದ್ರ ಕಾರಾಗೃಹಗಳ ಹಿರಿಯ ಅಧೀಕ್ಷಕರ (ಸೀನಿಯರ್ ಸೂಪರಿಂಟೆಂಡೆಂಟ್ ಆಫ್ ಸೆಂಟ್ರಲ್ ಪ್ರಿಸನ್ಸ್) ಎರಡು ಹುದ್ದೆಗಳು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 66 ಎಸ್‌ಆರ್‌ಪಿ 85, ದಿನಾಂಕ: 30.10.85 ರಲ್ಲಿ ರೂ.9580-14200 (ಪ್ರಸಕ್ತ ವೇತನ ಶ್ರೇಣಿ) ಕೇಂದ್ರ ಕಾರಾಗೃಹಗಳ ಮುಖ್ಯ ಅಧೀಕ್ಷಕರ ಹುದ್ದೆಗಳಾಗಿ ಸ್ಥಾನೋನ್ನತಿಗೊಂಡಿದೆ. ಈ ಹುದ್ದೆಗಳು ನೇಮಕಾತಿ ನಿಯಮಗಳ ಮೇರೆಗೆ ಭರ್ತಿಯಾದ ದಿನದಿಂದ ಜಾರಿಗೆ ಬರುತ್ತವೆ. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 94 ಪಿಆರ್‌ಇ 88-1, ದಿನಾಂಕ: 28.8.97 ರಲ್ಲಿ ಮುಖ್ಯ ಅಧೀಕ್ಷಕರ ಎರಡು ಹುದ್ದೆಗಳು ಮಂಜೂರಾಗಿದ್ದು, ಸದರಿ ವೃಂದದಲ್ಲಿ ಸದ್ಯ 4 ಹುದ್ದೆಗಳಿರುತ್ತವೆ.

ಮುಖ್ಯ ಅಧೀಕ್ಷಕರ ವೃಂದವು ಹೊಸ ವೃಂದವಾಗಿದ್ದು, ಸದರಿ ವೃಂದದಲ್ಲಿ ಎರಡು ಹುದ್ದೆಗಳು 1985 ರಲ್ಲಿಯೇ ಮಂಜೂರಾಗಿದ್ದರೂ ನೇಮಕಾತಿ ನಿಯಮಗಳ ರಚನೆಯಾಗದ್ದರಿಂದ ಇದುವರೆಗೆ ಭರ್ತಿಯಾಗದೇ ಹುದ್ದೆಗಳು ಸೃಜನೆಗೊಂಡ ಉದ್ದೇಶ ಸಫಲವಾಗಿರುವುದಿಲ್ಲ. ಇತ್ತೀಚಿಗೆ ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳು ಪರಿಷ್ಕೃತಗೊಂಡು ಜಾರಿಯಲ್ಲಿದೆ. ಸದರಿ ನಿಯಮಗಳನ್ವಯ ಮುಖ್ಯ ಅಧೀಕ್ಷಕರ ಹುದ್ದೆಗಳನ್ನು ಮುಂಬಡ್ತಿ ಮೂಲಕ ತುಂಬಬೇಕಾದಲ್ಲಿ ಕೇಂದ್ರ ಕಾರಾಗೃಹ ಅಧೀಕ್ಷಕರ ಹುದ್ದೆಯಲ್ಲಿ 5 ವರ್ಷಗಳಿಗೆ ಕಡಿಮೆ ಇಲ್ಲದ ಸೇವೆ ಸಲ್ಲಿಸಿರಬೇಕು ಒಂದು ವೇಳೆ 5 ವರ್ಷಗಳ ಸೇವೆ ಸಲ್ಲಿಸಿದ ಅಧಿಕಾರಿ ಲಭ್ಯವಿಲ್ಲದಿದ್ದಲ್ಲಿ, 3 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿದ ಅಧಿಕಾರಿಯನ್ನು ಬಡ್ತಿಗೆ ಪರಿಗಣಿಸಬೇಕೆಂದಿರುತ್ತದೆ. ಮುಖ್ಯ ಅಧೀಕ್ಷಕರ ಹುದ್ದೆ ಹೊಸ ವೃಂದವಾಗಿದ್ದು, ಸದರಿ ಹುದ್ದೆಗೆ ಇನ್ನೂ ಇಲಾಖಾ ಪರೀಕ್ಷೆಗಳು ನಿಗದಿಗೊಂಡಿರುವುದಿಲ್ಲ. ಆದರೆ ಪತ್ರಾಂಕಿತ ಹುದ್ದೆಗಳಿಗೆ ನಿಗದಿಪಡಿಸಿರುವ ಎಲ್ಲಾ ಪರೀಕ್ಷೆಗಳನ್ನು ಪಾಸು ಮಾಡಿರುವ ಅರ್ಹ ಅಧಿಕಾರಿಗಳು ಹಾಗೂ ಕನಿಷ್ಠ 3 ವರ್ಷ ಸೇವೆ ಸಲ್ಲಿಸಿದ ಕೇಂದ್ರ ಕಾರಾಗೃಹಗಳ ಅಧೀಕ್ಷಕರಿಗೆ ಬಡ್ತಿ ನೀಡಿ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 30.9.2004ರ ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮುಖ್ಯ ಅಧೀಕ್ಷಕರ ಹುದ್ದೆಗೆ ನಿಗದಿಪಡಿಸಬೇಕಾದ ಕಾರ್ಯ ನಿರ್ವಹಣಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ.

ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 113 ಪಿಆರ್‌ಇ 2004, ಬೆಂಗಳೂರು, ದಿನಾಂಕ: 25ನೇ ನವೆಂಬರ್ 2004**

ಕಾರಾಗೃಹಗಳ ಇಲಾಖೆಯಲ್ಲಿ ಹೊಸದಾಗಿ ಸೃಜನೆಗೊಂಡ ನಾಲ್ಕು ಕೇಂದ್ರ ಕಾರಾಗೃಹಗಳ ಮುಖ್ಯ ಅಧೀಕ್ಷಕ (ಚೀಫ್ ಸೂಪರಿಂಟೆಂಡೆಂಟ್ ಆಫ್ ಸೆಂಟ್ರಲ್ ಪ್ರಿಸನ್ಸ್) (ವೇತನ ಶ್ರೇಣಿ ರೂ.9580-14200) ಹುದ್ದೆಗೆ ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಸೂಚಿಸಿದಂತೆ ಕಾರ್ಯ ಹಂಚಿಕೆ ನಿಗದಿಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ಕಾಂತರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ).

**Annexure to the Government ORDER No. HD 113 PRE 2004, Dated: 25-11-2004**
**Duties and Responsibilities of Chief Superintendent**

1) Chief Superintendent will look after the main executive part of administration with over all supervision as enumerated in the manual. Apart from this, he shall visit the local Sub Jails as per the directions of Inspector General of Prisons and supervise regularly & effectively.

2) The Superintendent will act as per the directions of Chief Superintendent and carry out the works of daily routine.

3) Wherever the post of Chief Superintendent exists he shall do the duties of Jail Superintendent as enumerated in Rule 5 of Karnataka Prison Rules and Chapter III of Karnataka Prison Manual 1978. He shall exercise financial and administrative power entrusted to a Jail Superintendent to run the institutions.

4) He is answerable to the Inspector General Prisons/Deputy Inspector General of Prisons relating to the administration of the Jails he is heading.

5) The Superintendent working under Chief Superintendent shall assist the Chief Superintendent in all administrative matters and during the absence of Chief Superintendent, he shall be in charge Chief Superintendent.

6) It will be the responsibility of the Chief Superintendent to administer rules and regulations and guide the subordinates.

7) He can also look after new programmes, policies that are required from time to time

**A.S. KANTHARAJU**
Under Secretary to Government,
P.R. 1317 Home & Transport Department (Prisons & Cinema).

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಕುಣಿಗಲ್ ತಾಲ್ಲೂಕು ಸಂತೇಮಾವತ್ತೂರಿನಿಂದ-ರಾಘವನ ಹೊಸೂರಿಗೆ ಸೇರುವ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಸ್ತೆಶಾಖೆ: ಸಇಂ5:04-05, ದಿನಾಂಕ: 10.9.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಸಂತೆಮಾವತ್ತೂರು-ರಾಘವನ ಹೊಸೂರಿಗೆ ಸೇರುವ 9.00 ಕಿಮೀ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 100 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 29ನೇ ನವೆಂಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಸಂತೆಮಾವತ್ತೂರು-ರಾಘವನ ಹೊಸೂರಿಗೆ ಸೇರುವ 9.00 ಕಿಮೀ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶೇಖ್ ಅಬ್ದುಲ್ ವಾಜಿದ್**
ಪಿ.ಆರ್. 1320 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

**ಸಹಕಾರ ಸಚಿವಾಲಯ**

**ವಿಷಯ:** ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಕಲಂ 27(1)ನ್ನು ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ ನಿ. ಹಾವೇರಿ. ಹಾವೇರಿ ಜಿಲ್ಲೆ ಇದಕ್ಕೆ ಸಂಬಂಧಿಸಿದಂತೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ:** ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು, ಇವರ ಪತ್ರ ಸಂಖ್ಯೆ: ಡಿಎಸ್‌ಕೆ.ಇಎಸ್‌ಟಿಎಸ್.ಜಿಬಿಎಮ್:90: 2001-2002 ದಿನಾಂಕ: 08.09.2004.

**ಪ್ರಸ್ತಾವನೆ:**

ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ ನಿ. ಹಾವೇರಿ, ಹಾವೇರಿ ಜಿಲ್ಲೆ ಇದರ 2002-2003ನೇ ಸಾಲಿನ ಮಹಾಸಭೆಗಳನ್ನು ನಡೆಸುವ ಅವಧಿಯನ್ನು ದಿನಾಂಕ: 31.03.2005 ರವರೆಗೆ ವಿಸ್ತರಿಸಲು ಅನುಕೂಲವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, 1959ರ ಪ್ರಕರಣ 121 ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 27(1)ಕ್ಕೆ ಸೂಕ್ತ ತಿದ್ದುಪಡಿ ಮಾಡಬೇಕೆಂದು ಮೇಲೆ ಓದಲಾದ ಪತ್ರದಲ್ಲಿ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಕಬ್ಬು ಅಭಿವೃದ್ಧಿ ಆಯುಕ್ತರ ಮತ್ತು ಸಕ್ಕರೆ ನಿರ್ದೇಶಕರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 157 ಸಸಕಾ 2004, ಬೆಂಗಳೂರು, ದಿನಾಂಕ: 17ನೇ ಜುಲೈ 2004**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ 27(1)ರ ಪ್ರಕರಣವನ್ನು ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕರ್ನಾಟಕ ಸಹಕಾರ ಸಕ್ಕರೆ ಕಾರ್ಖಾನೆ ನಿ. ಹಾವೇರಿ ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ,-

**27ರ ಪ್ರಕರಣದಲ್ಲಿ:**

(1)ನೇ ಉಪ ಪ್ರಕರಣದಲ್ಲಿರುವ ಆರು ತಿಂಗಳು ಎಂಬ ಪದಕ್ಕೆ ಬದಲಾಗಿ ಹದಿನೆಂಟು ತಿಂಗಳು ಎಂಬುದಾಗಿ ಸೇರಿಸತಕ್ಕದ್ದು.

**ಸೂಚನೆ:** 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 31.03.2005ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ, ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1) ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಗಣೇಶಮೂರ್ತಿ**

ಪಿ.ಆರ್. 1319 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಲೋಕೋಪಯೋಗಿ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಲೋಇ 291 ಸೇಎಸು 2003, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2004**

ತಿದ್ದುಪಡಿ ಸಂಖ್ಯೆ: ಲೋಇ 291 ಸೇಎಸು 2003, ದಿನಾಂಕ: 9.10.2003 ರಲ್ಲಿ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 83 ಎಸ್‌ಪಿಜಿ 2002, ದಿನಾಂಕ: 11.4.2002 ರಲ್ಲಿ ಪ್ರಕಟಿಸಲಾಗಿರುವ ಅಧೀಕ್ಷಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ತಿದ್ದುಪಡಿ ಹೊರಡಿಸಿ ಕೆಲವು ಅಧೀಕ್ಷಕ ಇಂಜಿನಿಯರುಗಳ ಹೆಸರುಗಳನ್ನು ಸೇರ್ಪಡೆ ಮಾಡಲಾಗಿತ್ತು.

ಈ ತಿದ್ದುಪಡಿಯನ್ನು ಪ್ರಶ್ನಿಸಿ ಶ್ರೀ ಎಸ್. ನಾಗರಾಜಯ್ಯ ಮತ್ತಿತರರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 8219-8223:2003 ನ್ನು ಸಲ್ಲಿಸಿದ್ದರು. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ: 28.5.2004 ರಂದು ತೀರ್ಪು ನೀಡಿ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿದೆ.

ಶ್ರೀ ಆರ್. ಮಹದೇವ್ ಮತ್ತು ಹೆಚ್.ಎಂ. ಕೇದಾರಸ್ವಾಮಿ, ಅಧೀಕ್ಷಕ ಇಂಜಿನಿಯರ್‌ಗಳು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 1230-1233:2004 ನ್ನು ಸಲ್ಲಿಸಿದ್ದರು. ಸದರಿ ಅರ್ಜಿಯನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ತಿರಸ್ಕರಿಸಿತು. ಅದರ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 34715-713:2004 ಗಳನ್ನು ಸಲ್ಲಿಸಿದ್ದರು. ಈ ರಿಟ್ ಅರ್ಜಿಯನ್ನು ಕರ್ನಾಟಕ ಉಚ್ಚ ನ್ಯಾಯಾಲಯವು ಸಹ ತಿರಸ್ಕರಿಸಿತು. ಆ ತೀರ್ಪಿನ ವಿರುದ್ಧ ಭಾರತದ ಸರ್ವೋನ್ನತ ನ್ಯಾಯಾಲಯದಲ್ಲಿ ವಿಶೇಷ ಅರ್ಜಿ ಸಂಖ್ಯೆ: 19239-240-2004ನ್ನು ಸಲ್ಲಿಸಿದ್ದು, ಅದರಲ್ಲಿ ದಿನಾಂಕ: 15.10.2004 ರಂದು ಈ ಕೆಳಕಂಡಂತೆ ತೀರ್ಪು ನೀಡಿದೆ:-

"Printing dispensed with. The appeals shall be heard on the SLP paperbooks. Parties may file additional documents, if any, within six weeks. Original record need not be requisitioned.

During the pendency of the appeals it is directed that the promotions inter se the parties on the post of Chief Engineer shall be effected as per the seniority/gradation list it existed immediately before 4.2.2002, i.e. the date on which the 85th Amendment to the Constitution came into force."

ಮೇಲ್ಕಂಡ ತೀರ್ಪಿನನ್ವಯ ಸಾಮಾನ್ಯ ವರ್ಗದ ಇಂಜಿನಿಯರುಗಳ ಜೇಷ್ಠತೆಯನ್ನು ದಿನಾಂಕ: 4.2.2002 ಕ್ಕಿಂತ ಮುಂಚೆ ಇದ್ದ ವಸ್ತುಸ್ಥಿತಿಯಲ್ಲಿ ಗಮನಿಸಿ, ಆ ಪ್ರಕಾರ ನಿಗದಿಗೊಳಿಸಲು ನಿರ್ದೇಶಿಸಿದೆ. ಈ ಹಿನ್ನೆಲೆಯಲ್ಲಿ ದಿನಾಂಕ: 9.10.2003ರ ತಿದ್ದುಪಡಿಯು ನಿಷ್ಕ್ರಿಯವಾದಂತಾಗಿದೆ. ಆದ್ದರಿಂದ, ದಿನಾಂಕ: 9.10.2003ರ ತಿದ್ದುಪಡಿ ಸಂಖ್ಯೆ: ಲೋಇ 291 ಸೇಎಸು 2003 ನ್ನು ಈ ಮೂಲಕ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ಲಕ್ಷ್ಮೀನಾರಾಯಣ**

ಪಿ.ಆರ್. 1321 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸೇವೆಗಳು-ಎ).

**ವಿಷಯ:** ಹಾಸನ ಜಿಲ್ಲೆ ಹೊಳೇನರಸೀಪುರ ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಸ್ತೆಶಾಖೆ: ಸಇಂ7:ಹಾಸನ:ಹೊಳೇನರಸೀಪುರ:ಹಳ್ಳಿರಸ್ತೆ ಮೇಲ್ದರ್ಜೆ:2004-05, ದಿನಾಂಕ: 8.10.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆ ಹೊಳೇನರಸೀಪುರ ತಾಲ್ಲೂಕಿನ ಈ ಕೆಳಕಂಡ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1) ಹೊಳೆನರಸೀಪುರ ತಾಲ್ಲೂಕು ಕಲ್ಲಹಳ್ಳಿ-ಗವಿಸೋಮನಹಳ್ಳಿ ಮಳಲಿ ರಸ್ತೆ - 3.50 ಕಿಮೀ.
2) ಹೊಳೆನರಸೀಪುರ ತಾಲ್ಲೂಕು ಸಬ್ಬನಹಳ್ಳಿ ಕರಗನಹಳ್ಳಿ ರಸ್ತೆ - 2.60 ಕಿಮೀ.
3) ಹೊಳೆನರಸೀಪುರ ತಾಲ್ಲೂಕು ಚಾಕನಹಳ್ಳಿ ಪಿಲ್ಲೇನಹಳ್ಳಿ ಕುಂಚೇವು ರಸ್ತೆ - 4.00 ಕಿಮೀ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 87 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1) ಹೊಳೆನರಸೀಪುರ ತಾಲ್ಲೂಕು ಕಲ್ಲಹಳ್ಳಿ-ಗವಿಸೋಮನಹಳ್ಳಿ ಮಳಲಿ ರಸ್ತೆ - 3.50 ಕಿಮೀ.
2) ಹೊಳೆನರಸೀಪುರ ತಾಲ್ಲೂಕು ಸಬ್ಬನಹಳ್ಳಿ ಕರಗನಹಳ್ಳಿ ರಸ್ತೆ - 2.60 ಕಿಮೀ.
3) ಹೊಳೆನರಸೀಪುರ ತಾಲ್ಲೂಕು ಚಾಕನಹಳ್ಳಿ ಪಿಲ್ಲೇನಹಳ್ಳಿ ಕುಂಚೇವು ರಸ್ತೆ - 4.00 ಕಿಮೀ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 1323 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

**ವಿಷಯ:** ಧರ್ಮಸ್ಥಳ ಕ್ಷೇತ್ರದ ಧರ್ಮಸ್ಥಳ ದೇವಸ್ಥಾನದಿಂದ ನೇತ್ರಾವತಿ ನದಿಯ ಸ್ನಾನ ಘಟ್ಟವರೆಗಿನ 4.00 ಕಿಮೀ ಉದ್ದ ರಸ್ತೆಯನ್ನು (ಬೈಪಾಸ್) ಪ್ರವಾಸಿಗರ ಅನುಕೂಲಕ್ಕಾಗಿ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಸ್ತೆಶಾಖೆ: ಸಇಂ4:2004-05, ದಿನಾಂಕ: 23.11.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಧರ್ಮಸ್ಥಳ ಕ್ಷೇತ್ರದ ಧರ್ಮಸ್ಥಳ ದೇವಸ್ಥಾನದಿಂದ ನೇತ್ರಾವತಿ ನದಿಯ ಸ್ನಾನ ಘಟ್ಟವರೆಗಿನ 4.00 ಕಿಮೀ ಉದ್ದ ಗ್ರಾಮೀಣ ರಸ್ತೆಯನ್ನು (ಬೈಪಾಸ್) ಪ್ರವಾಸಿಗರ ಅನುಕೂಲಕ್ಕಾಗಿ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಅದರಂತೆಯೇ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 131 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2004**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1) ಧರ್ಮಸ್ಥಳ ಕ್ಷೇತ್ರದ ದೇವಸ್ಥಾನದಿಂದ ನೇತ್ರಾವತಿ ನದಿಯ ಸ್ನಾನ ಘಟ್ಟವರೆಗೆ (ಬೈಪಾಸ್ ರಸ್ತೆ) ಗ್ರಾಮೀಣ ರಸ್ತೆ - 4.00 ಕಿಮೀ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 1324 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

## ನಗರಾಭಿವೃದ್ಧಿ ಸಚಿವಾಲಯ

**ಅಧಿಕೃತ ಜ್ಞಾಪನ ಸಂಖ್ಯೆ: ನಅಇ 23 ನಯೋಸೇ 2004, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2004**

**ವಿಷಯ:** ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಜಂಟಿ ನಿರ್ದೇಶಕರ ಅಂತಿಮ ಜ್ಯೇಷ್ಠತಾ ಪಟ್ಟಿ.

ಅಧಿಕೃತ ಜ್ಞಾಪನ ಸಂಖ್ಯೆ: ನಅಇ 23 ನಯೋಸೇ 2004, ದಿನಾಂಕ: 26.03.2004 ರಲ್ಲಿ ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಜಂಟಿ ನಿರ್ದೇಶಕರ ಕರಡು ಜ್ಯೇಷ್ಠತಾ ಪಟ್ಟಿಯನ್ನು ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ಕೋರಲಾಗಿತ್ತು.

ಪ್ರಕಟಿತ ಜ್ಯೇಷ್ಠತಾ ಪಟ್ಟಿಗೆ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಆದ್ದರಿಂದ, ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಜಂಟಿ ನಿರ್ದೇಶಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ತಯಾರಿಸಿ ಈ ಅಧಿಕೃತ ಜ್ಞಾಪನದೊಂದಿಗೆ ಲಗತ್ತಿಸಿ ಪ್ರಕಟಿಸಲಾಗಿದೆ.

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ದಿನಾಂಕ: 01.01.2004 ರಲ್ಲಿದ್ದಂತೆ ನಗರ ಯೋಜನಾ ಜಂಟಿ ನಿರ್ದೇಶಕರ ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು | ನೇರ ನೇಮಕಾತಿ: ಮುಂಬಡ್ತಿ: ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ:ಜ್ಯೇಷ್ಠತೆಗೆ ನೈಜವಾಗಿ ಅರ್ಹತಾ ದಿನಾಂಕ |
|---|---|---|---|---|---|---|---|
| 1 | ಶ್ರೀ ರಾಮಚಂದ್ರನಾಯ್ಡು | ಮುಂಬಡ್ತಿ | - | 25.02.1946 | 24.02.1971 | 28.09.1996 | 28.09.1996 |
| 2 | ಶ್ರೀ ಹೆಚ್.ಬಿ. ಮುಕುಂದ | ” | - | 09.02.1952 | 06.01.1979 | 20.05.1999 | 20.05.1999 |
| 3 | ಶ್ರೀ ನಟರಾಜ್ | ” | ಪ.ಜಾ. | 15.04.1946 | 19.01.1973 | 21.06.2002 | 21.06.2002 |
| 4 | ಶ್ರೀ ಎಂ. ಗುರುಮೂರ್ತಿ | ” | - | 13.06.1946 | 16.01.1973 | 21.01.2003 | 10.02.2003 |
| 5 | ಶ್ರೀ ಎಸ್.ಎಸ್. ಟೊಪಗಿ | ” | - | 28.03.1954 | 06.01.1984 | 02.08.2003 | 02.08.2003 |

**ಟಿ. ರಂಗನಾಥ್**

ಪಿ.ಆರ್. 1332 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಕೃತ ಜ್ಞಾಪನ ಸಂಖ್ಯೆ: ನಅಇ 24 ನಯೋಸೇ 2004, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2004**

**ವಿಷಯ:** ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಸಹಾಯಕ ನಿರ್ದೇಶಕರ ಅಂತಿಮ ಜ್ಯೇಷ್ಠತಾ ಪಟ್ಟಿ.

ಅಧಿಕೃತ ಜ್ಞಾಪನ ಸಂಖ್ಯೆ: ನಅಇ 24 ನಯೋಸೇ 2004, ದಿನಾಂಕ: 26.03.2004 ರಲ್ಲಿ ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಸಹಾಯಕ ನಿರ್ದೇಶಕರ ಕರಡು ಜ್ಯೇಷ್ಠತಾ ಪಟ್ಟಿಯನ್ನು ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ಕೋರಲಾಗಿತ್ತು.

ಪ್ರಕಟಿತ ಜ್ಯೇಷ್ಠತಾ ಪಟ್ಟಿಗೆ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಆದ್ದರಿಂದ, ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಸಹಾಯಕ ನಿರ್ದೇಶಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ತಯಾರಿಸಿ ಈ ಅಧಿಕೃತ ಜ್ಞಾಪನದೊಂದಿಗೆ ಲಗತ್ತಿಸಿ ಪ್ರಕಟಿಸಲಾಗಿದೆ.

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ದಿನಾಂಕ: 01.01.2004 ರಲ್ಲಿದ್ದಂತೆ ನಗರ ಯೋಜನಾ ಸಹಾಯಕ ನಿರ್ದೇಶಕರ ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು **ಶ್ರೀಮತಿ:ಶ್ರೀಯುತರು** | ನೇರ ನೇಮಕಾತಿ: ಮುಂಬಡ್ತಿ: ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ:ಜ್ಯೇಷ್ಠತೆಗೆ ನೈಜವಾಗಿ ಅರ್ಹತಾ ದಿನಾಂಕ |
|---|---|---|---|---|---|---|---|
| 1 | ಕೆ. ನರಸಿಂಹಮೂರ್ತಿ | ಮುಂಬಡ್ತಿ | - | 29.11.1955 | 12.08.1976 | 30.07.1997 | 30.07.1997 |
| 2 | ಜಿ. ಕೆಂಪಯ್ಯ | ” | ಪ.ಜಾ. | 15.04.1951 | 11.01.1973 | 31.05.1999 | 31.05.1999 |
| 3 | ಪಿ.ಪಿ. ಧನೆ | ” | ಪ.ಜಾ. | 08.05.1954 | 10.06.1976 | 31.05.1999 | 31.05.1999 |
| 4 | ಮಾಯಿಗಯ್ಯ | ” | ಪ.ಜಾ. | 26.06.1946 | 16.06.1976 | 31.05.1999 | 31.05.1999 |
| 5 | ಚನ್ನಬಸಪ್ಪ | ” | - | 04.03.1950 | 06.01.1973 | 03.04.2000 | 03.04.2000 |
| 6 | ಎಲ್. ಲಿಂಗಯ್ಯ | ” | - | 06.06.1947 | 11.01.1973 | 03.04.2000 | 03.04.2000 |
| 7 | ಎನ್.ಕೆ. ತಿಪ್ಪೇಸ್ವಾಮಿ | ” | ಪ.ಪಂ. | 18.02.1970 | 11.03.1998 | 20.10.2001 | 20.10.2001 |
| 8 | ಎಲ್. ಶಶಿಕುಮಾರ್ | ” | ಪ.ಜಾ. | 30.06.1966 | 30.04.1998 | 03.04.2002 | 03.04.2002 |
| 9 | ಪಿ. ಸುನಿಲ್‌ಕುಮಾರ್ | ” | - | 18.12.1966 | 11.03.1998 | 16.09.2002 | 16.09.2002 |
| 10 | ಎನ್.ವಿ. ಧನಂಜಯರೆಡ್ಡಿ | ” | - | 28.09.1963 | 09.03.1998 | 16.09.2002 | 16.09.2002 |
| 11 | ಜೆ. ಸುಮ | ” | ಪ.ಜಾ. | 16.03.1970 | 09.03.1998 | 16.09.2002 | 16.09.2002 |
| 12 | ಲಕ್ಷ್ಮಿ ಕಾಂತ ಎಸ್. ಪವಾರ್ | ” | ಪ.ಜಾ. | 12.11.1970 | 16.07.1998 | 16.09.2002 | 16.09.2002 |

**ಟಿ. ರಂಗನಾಥ್**

ಪಿ.ಆರ್. 1333 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅಧಿಕೃತ ಜ್ಞಾಪನ ಸಂಖ್ಯೆ: ನಅಇ 22 ನಯೋಸೇ 2004, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2004**

**ವಿಷಯ:** ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಉಪ ನಿರ್ದೇಶಕರ ಅಂತಿಮ ಜ್ಯೇಷ್ಠತಾ ಪಟ್ಟಿ.

ಅಧಿಕೃತ ಜ್ಞಾಪನ ಸಂಖ್ಯೆ: ನಅಇ 22 ನಯೋಸೇ 2004, ದಿನಾಂಕ: 26.03.2004 ರಲ್ಲಿ ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಉಪ ನಿರ್ದೇಶಕರ ಕರಡು ಜ್ಯೇಷ್ಠತಾ ಪಟ್ಟಿಯನ್ನು ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸುವಂತೆ ಕೋರಲಾಗಿತ್ತು.

ಪ್ರಕಟಿತ ಜ್ಯೇಷ್ಠತಾ ಪಟ್ಟಿಗೆ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಆದ್ದರಿಂದ, ದಿನಾಂಕ: 1.1.2004 ರಲ್ಲಿದ್ದಂತೆ ನಗರ ಯೋಜನಾ ಇಲಾಖೆಯ ಉಪ ನಿರ್ದೇಶಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ತಯಾರಿಸಿ ಈ ಅಧಿಕೃತ ಜ್ಞಾಪನದೊಂದಿಗೆ ಲಗತ್ತಿಸಿ ಪ್ರಕಟಿಸಲಾಗಿದೆ.

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ದಿನಾಂಕ: 01.01.2004 ರಲ್ಲಿದ್ದಂತೆ ನಗರ ಯೋಜನಾ ಉಪ ನಿರ್ದೇಶಕರ ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು **ಶ್ರೀಮತಿ:ಶ್ರೀಯುತರು** | ನೇರ ನೇಮಕಾತಿ: ಮುಂಬಡ್ತಿ: ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ:ಜ್ಯೇಷ್ಠತೆಗೆ ನೈಜವಾಗಿ ಅರ್ಹತಾ ದಿನಾಂಕ |
|---|---|---|---|---|---|---|---|
| 1 | ಎಸ್.ಬಿ. ಹೊನ್ನೂರ | ಮುಂಬಡ್ತಿ | - | 25.07.1955 | 15.11.1983 | 20.05.1999 | 20.05.1999 |
| 2 | ಬಿ.ಎಂ. ತಿರುಕನಗೌಡರ್ | ” | - | 01.05.1956 | 07.11.1983 | 20.05.1999 | 20.05.1999 |
| 3 | ಚೌಡೇಗೌಡ | ” | - | 01.06.1956 | 20.12.1982 | 20.05.1999 | 20.05.1999 |
| 4 | ಎ.ವಿ. ರಂಗೇಶ್ | ” | - | 06.09.1956 | 10.06.1983 | 20.05.1999 | 20.05.1999 |
| 5 | ಬಿ.ಕೆ. ರಾಮಪ್ರಸಾದ್ | ” | - | 15.01.1956 | 13.06.1983 | 20.05.1999 | 20.05.1999 |
| 6 | ಬಿ. ಮಹೇಂದ್ರ | ” | - | 01.06.1959 | 23.04.1984 | 20.05.1999 | 20.05.1999 |
| 7 | ಸಿ. ಜಯಾನಂದಯ್ಯ | ” | - | 10.09.1947 | 12.07.1976 | 20.05.1999 | 20.05.1999 |
| 8 | ಕೆ.ಆರ್. ವೀರೇಂದ್ರನಾಥ್ | ” | - | 08.11.1954 | 01.06.1975 | 02.04.2002 | 02.04.2002 |
| 9 | ಐಜಾಜ್ ಅಹಮದ್ | ” | - | 09.02.1957 | 30.10.1976 | 30.12.2002 | 16.12.2002 |
| 10 | ಪಿ.ಇ. ರುದ್ರಪ್ಪ | ” | - | 20.05.1953 | 30.04.1984 | 24.04.2003 | 08.05.2003 |
| 11 | ಎಂ.ಸಿ. ಹಿರೇಮಠ | ” | - | 01.03.1947 | 21.10.1972 | 24.04.2003 | 02.05.2003 |

**ಟಿ. ರಂಗನಾಥ್**

ಪಿ.ಆರ್. 1334 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.